# ಸೈರಂಧ್ರಿ

ಹಾಗೂ

# ಮಗನ ಗೆಲವು

ಕೃಷ್ಣಮೂರ್ತಿ ಪುರಾಣಿಕ

ಸಾಹಿತ್ಯ-ಸೇವಾ-ಮಂದಿರ

ಗೋಕಾಕ

ಬೆಲೆ] [ ೧-೮-೦

ಮುದ್ರಕರು
ಶೇ. ಗೋ. ಕುಲಕರ್ಣಿ
ಸಾಧನ ಮುದ್ರಣಾಲಯ
ಧಾರವಾಡ

ಪ್ರಕಾಶಕರು
ಶ್ರೀಮತಿ ಸೌ॥ ಗಂಗಾಬಾಯಿ ಪುರಾಣಿಕ
ಸಾಹಿತ್ಯ ಸೇವಾ ಮಂದಿರ
ಗೋಕಾಕ



ಪ್ರಥಮ ಮುದ್ರಣ ೧೯೪೭
ದ್ವಿತೀಯ ಮುದ್ರಣ ೧೯೫೭

# ಪರಿವಿಡಿ

# ಅರಿಕೆ

## (ಎರಡನೆಯ ಆವೃತ್ತಿ)

'ಮಗನ ಗೆಲುವು' ೧೯೩೪ ರಲ್ಲಿ 'ಜಯ ಕರ್ನಾಟಕ'ದಲ್ಲಿಯೂ 'ಸೈರಂಧ್ರಿ' ೧೯೪೦ ರಲ್ಲಿ 'ಪ್ರಬುದ್ಧ ಕರ್ನಾಟಕ'ದಲ್ಲಿಯೂ ಮೊದಲ ಸಲ ಬೆಳಕು ಕಂಡು ೧೯೪೬ ರಲ್ಲಿ ಎರಡೂ ಕೂಡಿ ಒಂದೇ ಹೊತ್ತಿಗೆಯಲ್ಲಿ ಪ್ರಕಟವಾದವು. ಈ ಪುಸ್ತಕ ಪ್ರಕಟವಾದ ಎರಡು ವರುಷಗಳಲ್ಲಿಯೇ ಪ್ರತಿಗಳೆಲ್ಲ ತೀರಿಹೋದರೂ ಎರಡನೆಯ ಮುದ್ರಣವನ್ನು ಕೂಡಲೇ ಹೊರತೆಗೆಯಲು ಆಗಲಿಲ್ಲ. ಈಗ ಮಿತ್ರರ ಆಗ್ರಹದಿಂದ ಈ ಕೆಲಸ ಜರಗುವ ಸಂದರ್ಭ ಬಂದದ್ದಕ್ಕಾಗಿ ನನಗೆ ಸಂತೋಷವಾಗುತ್ತಿದೆ.

ಈ ನಾಟಕಗಳನ್ನು ಈ ದಿನಗಳಲ್ಲಿ ಬೇರೆ ಬೇರೆ 'ನಾಟ್ಯ ವಿಲಾಸಿ'ಗಳು ಅಭಿನಯಿಸಿ ತೋರಿದ್ದಾರೆ. ಧಾರವಾಡ, ಹೈದರಾಬಾದ, ಮುಂಬಯಿ ಬಾನುಲಿ ಕೇಂದ್ರಗಳು ಬಿತ್ತರಿಸಿವೆ. ಅದಕ್ಕಾಗಿ ನಾನು ಈ ಕಲಾಸಂಸ್ಥೆಗಳಿಗೆ ಕೃತಜ್ಞನಾಗಿದ್ದೇನೆ.

ಮೊದಲನೆಯ ಮುದ್ರಣದ ಮುನ್ನುಡಿಗಳನ್ನು ಈ ಆವೃತ್ತಿಯಲ್ಲಿಯೂ ಇಟ್ಟಿದ್ದೇನೆ. ಇವನ್ನು ಬರೆದುಕೊಟ್ಟ ಹಿರಿಯ ಗೆಳೆಯರಾದ ಶ್ರೀ ವಿ. ಕೃ. ಗೋಕಾಕ ಅವರಿಗೂ, ಡಾ. ರಂ. ಶ್ರೀ. ಮುಗಳಿಯವರಿಗೂ ಪ್ರಣಾಮಗಳನ್ನು ಸಲ್ಲಿಸುತ್ತೇನೆ. ಈ ನಾಟಕಗಳ ಬಗ್ಗೆ 'ಬಾಯಿ ಬಿಗಿ ವಿಮರ್ಶೆಯೆ! ರಸದೂಟ ಸಮಯವಿದೆ' ಎಂದು ಹೇಳಿದ ಹಿರಿಯಮಿತ್ರರಾದ "ಶ್ರೀರಂಗರನ್ನು ಅಭಿವಂದಿಸುತ್ತೇನೆ.

ಮೊದಲ ಆವೃತ್ತಿಯನ್ನು ಮುದ್ರಿಸಿದ ಗೆ. ಕುಲಕರ್ಣಿ ಶೇಷಗಿರಿರಾಯರೇ ಈ ಆವೃತ್ತಿಯನ್ನೂ ತಮ್ಮ ಸಾಧನಾ ಪ್ರೆಸ್ಸಿನಲ್ಲಿ ಅಂದವಾಗಿ ಮುದ್ರಿಸಿ ಕೊಟ್ಟಿದ್ದಾರೆ. ಅವರಿಗೆ ಕೃತಜ್ಞ.

ಸಾಹಿತ್ಯ-ಸೇವಾ-ಮಂದಿರ
ಗೋಕಾಕ
೧-೫-೧೯೫೬

ಕೃಷ್ಣಮೂರ್ತಿ ಪುರಾಣಿಕ

# ಮುನ್ನುಡಿ

ನನ್ನ ಮಿತ್ರರಾದ ಶ್ರೀ. ಕೃಷ್ಣಮೂರ್ತಿ ಪುರಾಣಿಕರ 'ಸೈರಂಧ್ರಿ' ಎಂಬೀ ದೃಶ್ಯ ಕಾವ್ಯವು ಮೊದಲು 'ಪ್ರಬುದ್ಧ ಕರ್ನಾಟಕ'ದಲ್ಲಿ ಪ್ರಕಟವಾಯಿತು. ಆಮೇಲೆ ಹಲವು ವರ್ಷಗಳಿಂದ ಪುಸ್ತಕರೂಪ ಪಡೆಯಬೇಕೆಂದು ಕಾದಿತ್ತು. ಆದರೆ ಯುದ್ಧಕಾಲದ ಕೆಂಪುಬಾವುಟವು ಈ ವರೆಗೆ ಅದನ್ನು ತಡೆದಿತ್ತು, ಈಗದು ಅವರ ಇನ್ನೊಂದು ಕೃತಿಯೊಡನೆ ಪ್ರಕಟವಾಗುವದೆಂದು ತಿಳಿದು ಸಂತೋಷ ಪಡುತ್ತೇನೆ.

ಕನ್ನಡ ಛಂದಸ್ಸಿನ ಚರಿತ್ರೆಯಲ್ಲಿ ರಗಳೆಯೆಂಬ ಪ್ರಕಾರವು ಒಂದು ಸಾವಿರವರುಷದಷ್ಟಾದರೂ ಹಳಮೆಯುಳ್ಳುದು. ಪಾದನಿರ್ಬಂಧವಿಲ್ಲದೆ ಪ್ರಾಸಬದ್ಧವಾಗಿ ವರ್ಣಕಗಳಿಗೆಂದು ಪಂಪನು ಅದನ್ನು ಸುಂದರವಾಗಿ ಬಳಸಿದನು. ಆಮೇಲೆ ಚಂಪೂ ಕಾವ್ಯಗಳಲ್ಲಿ ಅದರ ಬಳಕೆ ಒಂದು ಸಂಪ್ರದಾಯವೇ ಆಯಿತು. ರಗಳೆಯ ಈ ಸ್ವಚ್ಛಂದ ಗತಿಯನ್ನು ಕಥನ ತಂತ್ರದಲ್ಲಿ ಉತ್ತಮವಾಗಿ ಉಪಯೋಗಿಸಿದವನು ಹರಿಹರನು. ಆದರೆ ಆವನ ರಗಳೆಯ ಸಂಪ್ರದಾಯ ಸಾಕಷ್ಟು ಲೋಕ ಪ್ರಿಯವಾಗಲಿಲ್ಲ. ಅವನ ಶಿಷ್ಯನಾದ ರಾಘವಾಂಕನ ಷಟ್ಪದಿ ಮಾತ್ರ ಚಂಪೂ ಬರವಣಿಗೆಯನ್ನು ಸಹ ಹಿಂದೆ ಹಾಕಿ ತನ್ನ ಪ್ರಭಾವವನ್ನು ಬಹಳಷ್ಟು ಬೀರಿತು. ವಿಜಯನಗರ ಸಾಮ್ರಾಜ್ಯ ಕಾಲದಲ್ಲಿಯಂತೂ ಷಟ್ಪದಿ ತನ್ನದೊಂದು ಸಾಮ್ರಾಜ್ಯವನ್ನೇ ನೆಲೆಗೊಳಿಸಿತು. ಇದಕ್ಕೆ ಕೊಡಬಹುದಾದ ಕಾರಣಗಳಲ್ಲಿ ಪ್ರಾಸದ ಅನಿರ್ಬಂಧವು ಮಹತ್ವದ ಕಾರಣವಾಗಿದೆ. ಆದಿ–ಅಂತ್ಯ ಪ್ರಾಸಗಳ ನಿರ್ಬಂಧದ ಮೂಲಕ ರಗಳೆಯ ಓಟಕ್ಕೆ ತಡೆಯುಂಟಾಗುತ್ತಿತ್ತು. ಉಜ್ವಲ ಪ್ರತಿಭೆಯ ಹರಿಹರನು ಮಾತ್ರ ಪ್ರಾಸದ ರುಳಿಗಳನ್ನು ತನ್ನ ಕವಿತಾ ಕಾಮಿನಿಯ ಕಾಲಲ್ಲಿ ತೊಡಿಸಿದರೂ ಅವಳ ಓಟಕ್ಕೆ ಒಟ್ಟನಲ್ಲಿ ಭಂಗತರಲಿಲ್ಲ. ಉಳಿದ ಕವಿಗಳಿಗೆ ಅದು ಸಾಧ್ಯವಿರಲಿಲ್ಲ. ಹೀಗಾಗಿ ಪಾದ ನಿರ್ಬಂಧದ ಬದಲು ಬಂದ ಪ್ರಾಸ ನಿರ್ಬಂಧವು

ರಗಳೆಯ ಬೆಳವಣಿಗೆಯನ್ನು ಕೆಲಮಟ್ಟಿಗೆ ಕುಗ್ಗಿಸಿತು. ಅದೇ ಷಟ್ಪದಿಯಲ್ಲಿ ಸಾವಧಾನದ ವಿಸ್ತಾರಕ್ಕೆ ಅವಕಾಶದೊರೆತಂತೆ ಪ್ರಾಸದ ನಿರ್ಬಂಧವು ಅಂತ್ಯದಲ್ಲಿ ಇಲ್ಲದಾಯಿತು. ಎರಡನೆಯ ಅಕ್ಷರ ಪ್ರಾಸವಿದ್ದುದು ಕೆಲಮಟ್ಟಿಗೆ ಬಂಧನವಾಗಿದ್ದರೂ ಕನ್ನಡನುಡಿಯ ಸಹಜ ಗುಣದಿಂದ ಅದನ್ನು ಕಾಲ್ತೊಡಕಾಗಲಿಲ್ಲ. ಕತೆ ಹೇಳುವಲ್ಲಿ, ಸೃಷ್ಟಿಯನ್ನು ವರ್ಣಿಸುವಲ್ಲಿ, ಕಲ್ಪನೆಗಳ ಜಾಲವನ್ನು ಹೆಣೆಯುವಲ್ಲಿ, ಭಾವಗಳ ಸುಳಿಯನ್ನು ಬಿಡಿ ಬಿಡಿಸಿ ತೋರುವಲ್ಲಿ ಷಟ್ಪದಿ ವಿವಿಧ ರೂಪವಾಗಿ ಕನ್ನಡ ಕಾವ್ಯದ ವಾಹಕಗಳಲ್ಲಿ ಒಂದಾಯಿತು.

ಹೊಸಗನ್ನಡ ಕವಿತೆಯಲ್ಲಿ ಛಂದಸ್ಸಿನ ನೂರಾರು ಪ್ರಯೋಗಗಳು ನಡೆದಿವೆ. ಛಂದಸ್ಸಿಲ್ಲದ ಮುಕ್ತಛಂದವೂ ಬೆಳೆಯುತ್ತಿದೆ. ಇಂದಿನ ಅನೇಕ ಪ್ರಯೋಗಗಳಿಗೆ ಹಳೆಯ ತಳಹದಿ ಇರುವದು ನಿಜವಾದರೂ ಹೊಸತನದ ಅಂಶವೂ ಸ್ಪಷ್ಟವಾಗಿದೆ. ಇಂಗ್ಲಿಶ್ ಬ್ಲ್ಯಾಂಕವರ್ಸಿನ ದಾರಿಯಲ್ಲಿ ಹೆಜ್ಜೆಯಿಟ್ಟು ನಡೆದುಬಂದ ಸರಳರಗಳೆ ಅಂಥವುಗಳಲ್ಲಿ ಒಂದು. ರಗಳೆಯ ಅನಿರ್ಬಂಧ ಪಾದರಚನೆ ಇದರಲ್ಲಿ ಇದ್ದರೆ ಷಟ್ಪದಿಯಲ್ಲಿ ಸಹ ಸಂಪೂರ್ಣವಾಗಿರದ ಪ್ರಾಸದ ಅನಿರ್ಬಂಧ ಇದರ ಮುಖ್ಯ ಲಕ್ಷಣವಾಗಿದೆ. ಪ್ರಾಸವೇ ಸರಳರಗಳೆಯಲ್ಲಿ ಇಲ್ಲವೆನ್ನುವದಕ್ಕಿಂತ ನಿಯತಸ್ಥಾನದಲ್ಲಿ ಇರಬೇಕೆಂಬ ನಿರ್ಬಂದವಿಲ್ಲ ಎನ್ನಬೇಕು. ಕವಿತೆಯ ಓಘದಲ್ಲಿ ಶಬ್ದಾಲಂಕಾರದ ಹಲವು ಪರಿಯಲ್ಲಿ ಪ್ರಾಸವು ಬಂದೇ ಬರುತ್ತದೆ. ಆದರೆ ಅದರ ನಿರ್ಬಂಧದಿಂದ ಮುಕ್ತಿಯೆಂಬುದು ಸಹಜವಾದ ಕಥನಕ್ಕೂ ಆತ್ಮಾವಿಷ್ಕಾರಕ್ಕೂ ಅತ್ಯವಶ್ಯವೆಂದು ಹೊಸಕವಿ ಅರಿತಿದ್ದಾನೆ. ಸಣ್ಣಗಾತ್ರದ ಭಾವಗೀತೆಗಳಲ್ಲಿ ಪ್ರತಿಭೆಯು ಕಾವುಗೊಂಡು ಬೆಳೆವಾಗ ಸಹಜ ಪ್ರಾಸವು 'ಮಸೆದಗಾಳಿಪಕ್ಕ' ಪಡೆಯ ಬಹುದು. ಆದರೆ ಸುದೀರ್ಘವಾದ ಕಥನದಲ್ಲಿ, ಆತ್ಮನಿವೇದನದಲ್ಲಿ ಪ್ರಾಸದ ನಿರ್ಬಂಧ ಕವಿತೆಯ ಕೃತಕತೆಗೆ ಪ್ರೋತ್ಸಾಹಕೊಡುತ್ತದೆ. ಇಂಥ ಬರವಣಿಗೆಯಲ್ಲಿಯೂ ಕೃತಕತೆಯುಂಟಾಗದಂತೆ ನೋಡಿಕೊಳ್ಳುವ ಪ್ರತಿಭಾ ಶಾಲಿಗಳು ಹುಟ್ಟಲಾರರು ಎಂದಲ್ಲ. ಆದರೆ ಮಹಾಕವಿಯನ್ನು ಸಹ ಪ್ರಾಸದ ವ್ಯಾಮೋಹವು ಪ್ರತಿಭೆಯ ಎತ್ತರದಿಂದ ಚಮತ್ಕೃತಿಯ ಕೆಳಮಟ್ಟಕ್ಕೆ

ಎಳೆಯುವದು ತೀರ ಸಂಭವದ ಮಾತು. 'ಪ್ರಾಸವಿಲ್ಲದ ಪದವ ತಾಸು ಹಾಡಿದರೇನು' ಎಂಬ ಜಾನಪದ ರೂಢಿಯನ್ನು ಸರ್ವಜ್ಞ ಸಾರಿದ್ದಾನೆ. ಆದರೆ ತಾಸಾನುತಾಸಿನ ಹಾಡಿಗೆ ಪ್ರಾಸವಿಲ್ಲದಿರುವದೇ ಉಚಿತ ಎಂಬುದು ಇಂದಿನ ತಿಳುವಳಿಕೆ. ಈ ಬಗೆಯ ಮನೋಭೂಮಿಕೆ ಹೊಸ ಸಾಹಿತ್ಯದಲ್ಲಿ ಸರಳರಗಳೆಯ ಪ್ರಸಾರಕ್ಕೆ ಕಾರಣವಾಗಿದೆ. ಆದರೆ ಪ್ರಾಸ ವಿಲ್ಲವೆಂದೂ ಪಾದದ ಎಣಿಕೆ ಇಲ್ಲವೆಂದೂ ಯಾವ ನಿರ್ಬಂಧವೂ ಇಲ್ಲದ್ದೇ ಸರಳರಗಳೆಯೆಂದು ತಿಳಿಯಕೂಡದು. ಗದ್ಯ ಹಾಗೂ ಪದ್ಯದ ನಡುವಣ ಸೂಕ್ಷ್ಮವಾದ ಗೆರೆಯ ಮೇಲೆ ಸರಳರಗಳೆ ಸುಳಿಯುತ್ತದೆ. ಗದ್ಯದ ಸ್ವಾತಂತ್ರ್ಯವಿದ್ದರೂ ಅದರ ನಿರ್ವಿಲಾಸವಾದ ಸರಳತೆಯತ್ತ ಒಲಿಯಬಾರದು. ಪದ್ಯಕಾವ್ಯದ ವಿಲಾಸವನ್ನೂ ಓಜವನ್ನೂ ಸೂರೆ ಮಾಡಿದರೂ ಅದರ ಚಮತ್ಕೃತಿಯು, ಪ್ರೌಢಿಮೆಯು ಕಾಡಿನಲ್ಲಿ ಹೋಗ ಬಾರದು. ಈ ಅಸಿಧಾರಾವ್ರತವನ್ನು ಯಾರು ಎಷ್ಟು ಯಶಸ್ವಿಯಾಗಿ ಪಾಲಿಸುತ್ತಾರೋ ಸರಳರಗಳೆಯ ಪ್ರಭುತ್ವ ಅವರಿಗೆ ಸಲ್ಲುತ್ತದೆ.

ದಿವಂಗತ ಪಂಜೆಯವರು ಸರಳರಗಳೆಯ ಪಥದಲ್ಲಿ ಮೊದಲಡಿ ಇಟ್ಟವರೆಂದು ಹೇಳಲಾಗುತ್ತದೆ. "ಶ್ರೀ"ಯವರು ಅದರ ಆಗತ್ಯವನ್ನು ಕಂಡಿದ್ದರಂತೆ. ಆದರೆ ಅದನ್ನು ವಿಸ್ತಾರವಾಗಿ ಬಳಸಿ ಜನದ ನಿದರ್ಶ ನಕ್ಕೆ ತಂದವರು ಶ್ರೀ. ಮಾಸ್ತಿಯವರೇ. ಅವರ 'ಅರುಣ' ಸಂಗ್ರಹ ದಲ್ಲಿಯ 'ಸ್ಥಳಗಳ ಹೆಸರು' ಎಂಬ ಕಥನಕವನದಲ್ಲಿ ಸರಳರಗಳೆ ಕಣ್ದೆರೆಯಿತು. ಆ ಮೇಲೆ ಬರೆದ ಕನಕದಾಸರ ಕತೆಗಳಲ್ಲಿಯೂ ಅವರ ದನ್ನು ಬಳಸಿದ್ದಾರೆ. ಹೊಸಕವಿಗಳನೇಕರು ಭಾವಗೀತೆ, ಕಥನ-ನಾಟಕ ಇದಕ್ಕಾಗಿ ಸರಳರಗಳೆಗಳನ್ನು ಎತ್ತಿಕೊಂಡಿದ್ದಾರೆ. ಕಥನದ ಸರಣಿಯು ಕೆಲವು ದೀರ್ಘಕವನಗಳಲ್ಲಿ ಶ್ರೀ. ಕೆ. ವಿ. ಪುಟ್ಟಪ್ಪನವರ 'ಚಿತ್ರಾಂಗದಾ,' ಶ್ರೀ. ವಿನಾಯಕರ 'ಕಲೋಪಾಸಕ,' ಶ್ರೀ. ಎಸ್. ವಿ. ಪರಮೇಶ್ವರ ಭಟ್ಟರ 'ಜಹನಾರ' ಇವನ್ನು ಉಲ್ಲೇಖಿಸಬಹುದು. ದೃಶ್ಯರೂಪ ತಾಳಿದ ಸರಳರಗಳೆ ಪುಟ್ಟಪ್ಪನವರ 'ಯಮನ ಸೋಲು' ನಾಟಕದಲ್ಲಿ ಮೊದಲು ತಲೆಯೆತ್ತಿ ಅವರ ಮೂರು ನಾಟಕಗಳಲ್ಲಿಯೂ ಇತ್ತೀಚೆಯ

‘ಶೂದ್ರ ತಪಸ್ವಿ’ಯಲ್ಲಿಯೂ ಮುಂಬರಿಯಿತು. ಶ್ರೀನಿವಾಸರ ‘ಯಶೋಧರಾ’, ಭಾರತೀಯವರ ‘ತಪಸ್ವಿನಿ’, ನಾ. ಭಾ. ಅವರ ‘ಆಹ್ವಾನ’, ವಿನಾಯಕರ ‘ತ್ರೀಂದದಾರಿ’ ಈ ಮುಂತಾದುವು ಸರಳರಗಳೆಯಲ್ಲಿಯ ದೃಶ್ಯಗಳಾಗಿ ಹೊಸಗನ್ನಡಕ್ಕೆ ಲಭಿಸಿವೆ. ಪು. ತಿ. ನ ಅವರ ‘ಅಹಲ್ಯೆ’, ಗೋಕುಲ ನಿರ್ಗಮನ, ಕಾರಂತರ ‘ಮುಕ್ತದ್ವಾರ’ ಮುಂತಾದ ಕೆಲವು ಗೀತನಾಟಕಗಳಲ್ಲಿ ಪ್ರಾಸಬದ್ಧವಾದ ಪದ್ಯಗಳೂ ರಾಗಬದ್ಧವಾದ ಹಾಡುಗಳೂ ಅವುಗಳ ವೈಶಿಷ್ಟ್ಯ ನಿದರ್ಶಕವಾಗಿವೆ. ಕೆಲವು ಸರಳರಗಳೆಯ ದೃಶ್ಯಗಳಲ್ಲಿಯೂ ಆಗಾಗ ಗೀತಗಳನ್ನೂ ಪ್ರಾಸಬದ್ಧವಾದ ಕವಿತೆಗಳನ್ನೂ ಕಾಣಬಹುದು. ವಾರ್ಧಿಕ ಷಟ್ಪದಿಯ ಇಪ್ಪತ್ತು ಮಾತ್ರೆಗಳ ಪಾದವೇ ಅದರ ನಿಯತ ಲಕ್ಷಣವಾದರೂ ಅಲ್ಲಲ್ಲಿ ವ್ಯತ್ಯಾಸಗಳನ್ನು ಮಾಡಿಕೊಂಡದ್ದು ಕಂಡುಬಂದಿದೆ. ಈ ರೀತಿ ಸ್ವರೂಪದ ಅನಿಶ್ಚಿತಿ ಎಂದೆನಿಸಿಕೊಳ್ಳುವಷ್ಟು ಸರಳರಗಳೆ ವೈವಿಧ್ಯವನ್ನು ತೋರಿದೆಯಲ್ಲದೆ ಅದರಲ್ಲಿಯ ಪರಿಣತಿ ಹೊಸಗನ್ನಡಕ್ಕೆ ಇನ್ನೂ ದೊರೆತಿಲ್ಲ. ಆಯಾ ಕವನಗಳನ್ನೂ ದೃಶ್ಯಗಳನ್ನೂ ವಿಮರ್ಶಿಸಲು ಇದು ಅವಕಾಶವಲ್ಲ. ಆದರೆ ಸರಳರಗಳೆಯ ಅಸಿಧಾರಾವ್ರತವನ್ನೂ ಪೂರ್ಣವಾಗಿ ಸಾಧಿಸಿಲ್ಲ ಎನ್ನಬಹುದು. ಅದರ ಗುಣಾತಿಶಯವು ತೋರಿದಂತೆ ಲೋಪದೋಷಗಳೂ ಎದ್ದು ಕಾಣುವಂತಿವೆ. ಕೆಲವರಲ್ಲಿ ಸರಳರಗಳೆ ತೀರ ಸರಳವೂ ‘ರಗಳೆ’ಯೂ ಆಗಿದ್ದರೆ ಬೇರೆ ಕೆಲವರಲ್ಲಿ ಅದು ಅತಿ ವಾಚಾಲವೂ ಕೃತಕವೂ ಆಗಿದೆ. ಪ್ರಾಸದ ನಿರ್ಬಂಧವಿಲ್ಲದೆ ಹೊರಟ ಪ್ರತಿಭೆಯ ಹಕ್ಕಿ ಮಾತಿನ ನಿರ್ಬಂಧವನ್ನೂ ಇಟ್ಟುಕೊಳ್ಳದೆ ಬೇಕಾದಲ್ಲಿ ಸುತ್ತಾಡಹೊರಟಿದೆ. ಅದರ ಪ್ರಯೋಗದಲ್ಲಿ ಬಹುಮಟ್ಟಿಗೆ ಯಶಸ್ವಿಯಾದ ಶ್ರೀ. ಮಾಸ್ತಿ ಹಾಗೂ ಶ್ರೀ. ಕೆ. ವಿ. ಪುಟ್ಟಪ್ಪನವರು ಹೊಸಗನ್ನಡಕ್ಕೆ ಚಿರವಾದ ಕಾಣಿಕೆಗಳನ್ನು ಸಲ್ಲಿಸಿದ್ದಾರೆ. ಸಹಜ ಸಂಭಾಷಣೆಯ ಧಾಟಿಯಲ್ಲಿ ಕವಿತೆಯ ತೂಕವನ್ನೂ ಮಾತಿನ ನಯವನ್ನೂ ಕಳೆದುಕೊಳ್ಳದೆ ಮಾಸ್ತಿಯವರ ಕತೆಹೇಳುವ ಸರಣಿ ವಿಶಿಷ್ಟವೂ ರಮ್ಯವೂ ಆಗಿದೆ. ಅವರ ದರ್ಶನ, ಕಲ್ಪಕತೆ ಸರಳರಗಳೆಯ ಸರಳತೆಯಲ್ಲಿಯೂ ಕೆಲವು ಸಲ ಕವಿತೆಯ ಎತ್ತರಕ್ಕೆ ಕೈ ಚಾಚಿವೆ. ಪುಟ್ಟಪ್ಪನವರು ಕಲ್ಪನೆಯ ಹಾಗೂ ಭಾಷೆಯ ಸಂಪತ್ತಿ

ಯಿಂದಲೂ ಪ್ರವಾಹಿಯಾದ ಶೈಲಿಯಿಂದಲೂ ಸರಳರಗಳೆಯ ಮಟ್ಟ
ವನ್ನು ಎತ್ತರಿಸಿದ್ದಾರೆ, ದೃಶ್ಯದ ಜೀವಾಳವನ್ನು ಅದರಲ್ಲಿ ಪ್ರಕಟ
ಗೊಳಿಸಿದ್ದಾರೆ. ಆದರೆ ಮಾಸ್ತಿಯವರ ಸಹಜತೆ ಗದ್ಯದ ನೀರಸತೆಯ
ಹತ್ತಿರವಾಗಿ ಸುಳಿದರೆ ಪುಟ್ಟಪ್ಪನವರ ಸಂಪತ್ತಿ ಕೃತಕತೆಯ ಹತ್ತಿರ
ಕಾಲಿಡುತ್ತದೆ. ಇದರಿಂದ ತೋರುವ ಕುಂದುಕೊರತೆಗಳನ್ನು ಅಲ್ಲ
ಗಳೆಯಬಾರದಾದರೂ ಒಂದು ನೀರಸ, ಇನ್ನೊಂದು ಕೃತಕವೆಂದು ಕೆಡೆ
ನುಡಿಯುವದು ತೀರ ಸ್ಥೂಲವಿಮರ್ಶೆಯಾಗುತ್ತದೆ.

ಇಂಥ ಹೊಸ ಒಂದು ಕಾವ್ಯಪ್ರಕಾರದ ಪರಂಪರೆಗೆ ತಮ್ಮ ಮುಡಿ
ಪನ್ನು ಸಲ್ಲಿಸಲು ಶ್ರೀ. ಕೃಷ್ಣಮೂರ್ತಿಯವರು ಸೈರಂಧ್ರಿ ಹಾಗೂ ಮಗನ
ಗೆಲುವು ಎಂಬೆರಡು ದೃಶ್ಯಗಳನ್ನು ರಚಿಸಿದ್ದಾರೆ. ಅವುಗಳಲ್ಲಿ 'ಸೈರಂಧ್ರಿ'
ಸುಪ್ರಸಿದ್ಧವಾದ ಕೀಚಕ ಪ್ರಸಂಗವನ್ನು ಆಧರಿಸಿ ಬರೆದ ರೂಪಕ.
ದೃಶ್ಯರಚನೆ, ಸಂವಾದ ವೈಖರಿ, ಕಲ್ಪನಾವಿಲಾಸ ಇವುಗಳಲ್ಲೆಲ್ಲ ಈ
ರೂಪಕವು ತೋರಿದ ಶಕ್ತಿ ಬಹಳ ಮೆಚ್ಚುವಂಥದು. ಸೈರಂಧ್ರಿ ಕೀಚಕನ
ಹತ್ತರ ಮೊದಲು ಹೋದಾಗಿನ ದೃಶ್ಯ, ಭೀಮನನ್ನು ಕೆಣಕಿದ ದೃಶ್ಯ,
ಕೀಚಕ ವಧೆಯ ಕೊನೆಯ ದೃಶ್ಯ ನಾಟ್ಯಗುಣದಿಂದಲೂ ಕವಿತಾ
ಶಕ್ತಿಯ ಹಾಗೂ ಶೈಲಿಯ ರಭಸದಿಂದಲೂ ತುಂಬ ಪರಿಣಾಮಕಾರಿ
ಯಾಗಿವೆ. ಭೀಮ–ದ್ರೌಪದಿಯರ ಪಾತ್ರದರ್ಶನವು ಯಥೋಚಿತ
ವಾಗಿದೆ. ಕೊನೆಯ ದೃಶ್ಯದಲ್ಲಿ ಧರ್ಮರಾಜ, ವಿರಾಟರಾಜ, ಇವರೆಲ್ಲ
ಆಕಸ್ಮಿಕವಾಗಿ ಬಂದು ಸೇರಿದ್ದು ನಂಬಿಗೆಯ ಮೇಲೆ ಹೆಚ್ಚು ಭಾರಹಾಕಿ
ದಂತೆ ತೋರಬಹುದು ಆದರೆ 'ಕೌರವನ ರಕ್ತಕ್ಕೆ ಕೀಚಕನ ನೆತ್ತರೆಡೆ
ನೈವೇದ್ಯ ಕಾಣಣ್ಣ' ಎಂಬಲ್ಲಿಯ ಸಮಾರೋಪದ ಕಲ್ಪನೆ ನಿಜವಾಗಿಯೂ
ಹೃದ್ಯವಾಗಿದೆ. ಇದರಲ್ಲಿ ಭೀಮನ ಸ್ವಭಾವವರಳಿದಷ್ಟೇ ಮಹಾಭಾರತದ
ಕಥಾನಕಕ್ಕೆ ವಿಶೇಷಾರ್ಥವೊಂದು ತಲೆದೋರಿದೆ. ಹಸಿದ ರಣಚಂಡಿ
ತಡೆಯಲಾರದೆ ಕೀಚಕನ ಚಿಕ್ಕ ನೈವೇದ್ಯವನ್ನು ಸೇವಿಸಿ ಆ ಮೇಲೆ
ಕೌರವನ ಮಹಾನೈವೇದ್ಯಕ್ಕೆ ಕೈ ಇಕ್ಕಿದಳೆಂಬ ಕಲ್ಪನೆಯಲ್ಲಿ ಆ
ವಿಶೇಷಾರ್ಥವಿದೆ. ಸರಳರಗಳೆಯ ದೃಷ್ಟಿಯಿಂದ 'ಸೈರಂಧ್ರಿ'ಯ ಶೈಲಿ
ಸತ್ವಯುತವಾಗಿದೆ, ನಾಟ್ಯೋಚಿತವಾಗಿದೆ. ಆದರೆ ಗದ್ಯದ ಮೇರೆಯಲ್ಲಿ

ಒಮ್ಮೆ, ಕೃತಕತೆಯು ಎಲ್ಲೆಯಲ್ಲಿ ಒಮ್ಮೆ ನುಸುಳಿರುವುದೂ ಉಂಟು. ಕ್ರಮೇಣ ಶ್ರೀ. ಪುರಾಣಿಕರ ಶೈಲಿ ಪರಿಪಾಕಗೊಂಡು ಹೊಸಗನ್ನಡಕ್ಕೆ ತೊಡವಾಗಬಲ್ಲ ಕೃತಿಗಳನ್ನು ನೀಡುವುದೆಂದು ಆಶಿಸುತ್ತೇನೆ. ಅವರ ಕವಿತಾಶಕ್ತಿ ದೃಶ್ಯಕಾವ್ಯಗಳಲ್ಲಿಯೂ ಬಿಡಿಕವನಗಳಲ್ಲಿಯೂ ತನ್ನ ಗುಣ ವಿಶೇಷವಾದ ವೀರಶ್ರೀಯನ್ನೂ, ಲೋಕದ ದುಃಖದರಿವನ್ನೂ ಬಹು ಚನ್ನಾಗಿ ತೋರಿದೆ.

ಕನ್ನಡ ಕಾವ್ಯ ರಸಿಕರು ಈ ಕೃತಿಯನ್ನು ಬರಮಾಡಿಕೊಂಡು ತಮ್ಮ ಮೆಚ್ಚುಗೆಯಿಂದಲೂ ಸಹೃದಯ ವಿಮರ್ಶೆಯಿಂದಲೂ ಶ್ರೀ. ಪುರಾಣಿಕರ ಮುಂದಿನ ನಿರ್ಮಾಣಕ್ಕೆ ಅವಶ್ಯವಾದ ಪ್ರೇರಣೆಯನ್ನು ಒದಗಿಸುವರೆಂದು ಮನಸಾರೆ ಹಾರೈಸುತ್ತೇನೆ.

೧೬–೪–೧೯೪೬

—ರಂ. ಶ್ರೀ. ಮುಗಳಿ

ತಮ್ಮ ಬಡತನದ ಬಾಳುವೆಯಲ್ಲಿಯೂ

ಮಕ್ಕಳ ವಿದ್ಯೆಗೊಂದು ದಾರಿತೋರಿದ

ನನ್ನ

ತಂದೆ ತಾಯಿ

ಇವರ

ಪಾದಾರವಿಂದಗಳಲ್ಲಿ

ಅರ್ಪಿಸಿದ ಕಾಣಿಕೆ

—ಕೃಷ್ಣಮೂರ್ತಿ

# ಈ ಲೇಖಕರ ಬೇರೆ ಕೃತಿಗಳು

---

ರಾಮೂನ ಕತೆಗಳು. ಒಂದೇ ವ್ಯಕ್ತಿಗೆ ಸಂಬಂಧಿಸಿದ ಒಂಬತ್ತು ಕತೆಗಳು.
ಬಾಳ ಕನಸು. ಕವನ ಸಂಗ್ರಹ.

ಸೈರಂಧ್ರಿ ಹಾಗೂ ಮಗನಗೆಲವು — ಎರಡನೆಯ ಆವೃತ್ತಿ
ದೊರೆಸಾನಿ ಎರಡನೆಯ ಆವೃತ್ತಿ
ರಾಧೇಯ
ರತಿ-ವಿಲಾಪ
} ರಗಳೆಗಳಲ್ಲಿ ಬರೆದ ಕಾವ್ಯನಾಟಕಗಳು

## ಕಾದಂಬರಿಗಳು

ಮುಗಿಲ ಮಲ್ಲಿಗೆ
ಕೊನೆಯದಾರಿ
ತೆರೆದ ಕಣ್ಣು
ಮಂಜುಳಾ
ಹೊಸಬಾಳು
ಹಬ್ಬಿದ ಬಳ್ಳಿ
ಮುತ್ತೈದೆ (ಎರಡನೆಯ ಆವೃತ್ತಿ)
ಬೆವರಿನ ಬೆಲೆ
ಮನೆತುಂಬಿದ ಹೆಣ್ಣು (ಎರಡನೆಯ ಆವೃತ್ತಿ)
ಭಾಗೀರಥಿ
ಕವಲು ದಾರಿ
ಮಣ್ಣಿನ ಮಗಳು
ಮನಸೋತ ಮನದನ್ನೆ

# ಸೈರಂಧ್ರಿ

## ದೃಶ್ಯ ೧

[ ವಿರಾಟನಗರದ ಬಾಹ್ಯೋದ್ಯಾನ. ಕಂಕಭಟ್ಟನು ತೋಟದ ಕಡೆಯ ಭಾಗದಲ್ಲಿ ಹೂವುಗಳನ್ನು ನೋಡುತ್ತ ನಿಂತಿದ್ದಾನೆ. ಸಂಜೆಯ ೫ ಗಂಟೆಯ ಸಮಯವಾಗಿರಬಹುದು. ಸೈರಂಧ್ರಿಯು ಹೆಂಡದುಂಬಿದ ಹೂಜೆಯನ್ನು ಹೊತ್ತುಕೊಂಡು ಉದ್ವಿಗ್ನಳಾಗಿ ತೋಟದ ಬೀದಿಗುಂಟ ಬರುತ್ತಾಳೆ. ಉದ್ವೇಗಾತಿರೇಕದಿಂದ ಮೋರೆಯು ಕೆಂಪಗಾಗಿ ಕಣ್ಣಲ್ಲಿ ನೀರೂರಿದೆ. ]

ಸೈರಂಧ್ರಿ ( ಉಸಿರೆಳೆದು )—ಹದಿಮೂರು ವರುಷಗಳ ವನವಾಸ ಕಳೆದರೂ
ಹದಿಬದೆಯ ಕೆಣಕುತಿಹ ಘಟನೆಗಳು ಮುಗಿದಿಲ್ಲ.
ಚಂಡಭುಜ ಬಲರಾದ ಪಾಂಡವರ ಕುಲಪತ್ನಿ
ಗೇನು ಬಂತೋ ಕಾಲ ! ಕೀಳು ತೊತ್ತಿನ ತೆರದಿ
ಕೀಚಕನ ಮಂದಿರಕೆ ಸುರೆಯನೊಯ್ಯುವ ಶೂಲ !
ಘೋರ ಪಾತಕಿಯವನ, ದುರುಳಕಾಮುಕನವನ
ಮನದಾಶೆಯರಿತಿಹೆನು; ಅರಿತು ಮಾಡುವದೇನು ?
ದಾಸ್ಯವಪ್ಪಿದ ನರರ ಬಾಳೊಂದು ಬಾಳೆ ? ಹಾ !
ತೊತ್ತಾಗಿ ಬಾಳುವೊಡೆ ಸೌಂದರ್ಯ ಮುಳುವಾಯ್ತು.
ಪಾಂಡವರ ಕುಲದೇವಿ ! ನಿನ್ನ ಕುಲ ಕನ್ನಿಕೆಯ
ಮಾನವನು ಕಾಯಮ್ಮ ! ಶತಕೋಟಿಸಲ ನಮಿಸಿ
ಸೆರಗೊಡ್ಡಿ ಬೇಡುವೆನು ದ್ರೌಪದಿಯನುಳಿಸಮ್ಮ !
ರಾಣಿಯಾಣತಿ ಮೀರಿ ನಡೆಯಲಾರೆನು ದೇವಿ
ನೀನೆನ್ನ ನೆರವಾಗು. ಕಾಲನರಮನೆಗೆಂದು
ಹೋಗುವೆನು ನಾನಿಂದು. ಕೀಚಕನು ಕೆಣಕಿದೊಡೆ
ನೀನೆನ್ನ ಗತಿ ದೇವಿ: ನನ್ನ ಜೀವದ ಹಂಗು
ನನಗಿಲ್ಲವಾದರೂ ನಮ್ಮ ಕುಲದಭಿಮಾನ
ವೆನಗಿಹುದು ಕಾಣಮ್ಮ ! ಗಂಡರೈವರ ನೆರವ
ನೀಯಮ್ಮ ಕುಲದೇವಿ ! [ ನಮಿಸಿ, ಮುಂದೆ ಸಾಗುವಷ್ಟರಲ್ಲಿ ]

**ಕಂಕಭಟ್ಟ** [ ಅವಳನ್ನು ತಡೆದು ]–

ಆವೆಡೆಗೆ ಸ್ಯೆರಂಧ್ರಿ ?
ಕೆಂಪಡರಿ ನಿಂತಿರುವ ಕಣ್ಣುಗಳು ನಿನ್ನಲ್ಲಿ
ಸಂಕಟವ ತೋರುತಿವೆ. ನಿನ್ನ ಕಜ್ಜವಿದೇನು ?
ಆವೆಡೆಗೆ ಸಾಗುತಿಹೆ ?

**ಸ್ಯೆರಂಧ್ರಿ** ( ನಿರಾಶೆಯ ದನಿಯಲ್ಲಿ – ಕಾಲನರಮನೆಗಿಂದೆ
ಹೇಳುವೆನು ವೀರವರ ! ಪಾಂಡವರ ಬನ್ನಗಳು
ಮುಗಿದಿಲ್ಲ

**ಕಂಕಭಟ್ಟ** [ ಗಾಬರಿಯಾಗಿ ]–ಹದಿಮೂರು ವರುಷಗಳ ವನವಾಸ
ದಿರುವಿನಲಿ ವೀರವರನೆಂದೆನ್ನ ನೀನೆಂದು
ಕರೆದಿಲ್ಲ. ಏತಕವಸರವಾದ ಕಜ್ಜವಾ
ವುದು ದೇವಿ ! ಬೇಗ ನುಡಿ ! ಬನ್ನಗಳನುಂಡುಂಡು
ಪಾಂಡವರು ಸೋತಿಹರು.

**ಸ್ಯೆರಂಧ್ರಿ**—

ನನ್ನ ಭಾಗ್ಯದ ದೇವ :
ನನ್ನ ರೂಪದ ಸಿರಿಗೆ ಕೀಚಕನು ಸೋತಿಹನು.
ತೊತ್ತೆಂದೆ ತಿಳಿದಿಹನು. ರೂಪವಿಹ ತೊತ್ತುಗಳು
ಕೀಚಕನ ಸೊತ್ತುಗಳು. ನಿನ್ನೆ ಕಾಮುಕನವನು
ರಾಣಿಯೆಡೆ ಬಂದಾಗ ನಿನ್ನವಳ ನೋಡಿದನು.
ಕಾಮುಕನ ಕಾಮನೆಗೆ ಸೆಲೆಯೊಡೆಯಿತೆಂಬಂತೆ !
ನನ್ನ ನೋಡಿದ ನೋಟವಿಂಗಿತವ ಗುರುತಿಸಿತು.
ನನ್ನೆದೆಯು ಬರೆಯಾಯ್ತು.

**ಕಂಕಭಟ್ಟ** [ ನಡುವೆ ಬಾಯಿಹಾಕಿ ]— ದುರುಳ ಮಾನವನವನು !
ರಾಣಿಯರ ನೆರವಿರಲು ನಿನಗೇಕೆ ಭಯ ದೇವಿ !

**ಸ್ಯೆರಂಧ್ರಿ**— ರಾಣಿಯರ ನೆರವಂತೆ ! ನನ್ನೊಡನೆ ಹೆಂಡವನು
ಈ ದಿನವೆ ಕಳುಹಿಸಲು ರಾಣಿಯರ ನೆರವಾಯ್ತು.
ತಮ್ಮನನು ಹೊಗಳಿದರು, ಕೀಚಕನ ಗುಣಗಾನ
ಮಾಡಿದರು ದೇವಿಯರು. ‘ ಹೊಸಬಳಿರುವೆನು ತಾಯೆ

ಅರಮನೆಯು ಅರಿವಿಲ್ಲ, ಉಳಿದವರನಟ್ಟಿದರೆ
ಉಪಕಾರವಾಗುವದು.' ಎಂದೆಸಿತು ಬೇಡಿದೆನು
ಹಲ್ಕಿರಿದು ಕೇಳಿದೆನು.

**ಕಂಕಭಟ್ಟ**— ಕೇಳಲಿಲ್ಲವೆ, ರಾಣಿ ?

**ಸೈರಂಧ್ರಿ**— ಹಂಚಿಕೆಯು ಹದನವದು ನೋಡೊಡೆಯ! ಪಡಿನುಡಿಯ
ಬೇಡೆಂದು ನನ್ನನೇ ಕಳುಹಿದಳು. ಅಕಟಕಟ!
ಅರಮನೆಯ ಆಳುಗಳು ಗುಜುಗುಟ್ಟ ತೊಡಗಿದರು.
ಮೋಸವಿಹುದಲೆ ದೇವ ! ಅದಕಾಗಿ ಬೆಚ್ಚಿಹೆನು.
ಕೀಚಕನು ಕಣಿಕಿದೊಡೆ ಮುಂದೆನ್ನ ಗತಿಯೇನು
ಹೇಳೊಡೆಯ ! ಗಂಡರೈವರ ಮಡದಿ ಪಾಂಡವರ
ಕುಲಪತ್ನಿಗೇನು ಬಂತೋ ಕಾಲ ! ( ಕಣ್ಣೀರಿಡುವಳು )

**ಕಂಕಭಟ್ಟ** [ ಅವಳ ವ್ಯಾಪಡವೃತ್ತ ]— ಸೈರಿಸೆಲಿ
ಸೈರಂಧ್ರಿ ! ಭಯಭೀತಳಾಗದಿರು ; ದೇವ ದೇ
ವನ ನೆರವು ಮಾನವನು ಕಾಯುವದು [ನಿಟ್ಟುಸಿರಿಳಿದು] ಪರಮಾತ್ಮ !
ಅಜ್ಞಾತ ವಾಸದಲಿ ಮಾಸವೆರಡನು ದೂಡೆ
ಪಾಂಡವರ ಬಾನಿನಲಿ ನೇಸರುದಿಸುವನೆಂದು
ನಾನೆಸಿತೊ ಕನಸುಗಳ ಹೆಣೆದಿದ್ದೆ ; ಬಿಡುಗಡೆಯೆ
ನಮಗೆಂದು ಬಗೆದಿದ್ದೆ. ಬಿಡುಗಡೆಯ ಬೀದಿಯಲಿ
ಮುಳ್ಳುಹಾಸಿಗೆಯೆಂದು ತಿಳಿದವರು ಹೇಳುವದು
ಸುಳ್ಳಲ್ಲ. ಹಾ ವಿಧಿಯೆ ! ಹೆಂಡತಿಯ ತಡವಿದೊಡೆ
ಕೀಚಕನ ಚಂಡಾಡಿ ಬಾಳದಿರುವನೆ ಭೀಮ?
ಕೇಳುವನೆ ಅರ್ಜುನನು? ಅಕಟಕಟ ! ಜಗದಿ ಪಾಂ
ಡವರಿರವಿನರಿವಾದ ಮರುದಿನವೆ ವನವಾಸ
ಮರುಳುವದು. ಏನು ವಿಷಮವೊ ಕಾಲ ! ಪಾಂಡವರಿ
ಗಳಿಗಾಲ ! ಗಂಡರೈವರ ಬಲವು ನಿಸಗಿಹುದು
ತಾಳೆಂದು ಸತಿಯಳನು ಸಂತೈಸಿ ಕರೆಯುವದ

ಕಿಂದಿಲ್ಲ. ಪಾಂಡವರ ಕೈವಿಡಿದು ಯಾವ ಭಾ
ಗ್ಯವ ಪಡೆದು ಬಾಳಿದಳು ಕುಲಪತ್ನಿ! ಬನ್ನಗಳ
ಸುತ್ತಿನಲಿ, ಅಪಮಾನದಗ್ನಿಯಲಿ ಬೆಂದು ಹೋ
ದಳು ಮಡದಿ! ಪಾಂಡವರ ಕಾಯುತಿಹ ದೇವತೆಯೆ!
ನೀನಿಂದು ನೆರವಾಗು. ದುರಿತ ವನಧಿಯ ಮೇಲೆ
ದಾರಿ ತೋಚದು ಎನಗೆ. ಬಾ ಬೇಗ! ನೆರವಾಗು!

(ವಿಚಾರ ಮೂಢನಾಗುವನು)

ಸೈರಂಧ್ರಿ (ವ್ಯಾಕುಲಳಾಗಿ)—ಏನಿದೇನಿದು ದೊರೆಯೆ? ನೀನಿಂತು ವ್ಯಾಕುಲದಿ
ಮುಳುಗಿದೊಡೆ ಬನ್ನ ಮಡುವಲಿ ಸಿಕ್ಕಿ ಬೆಂದವಳ
ಗತಿಯೇನು?

ಕಂಕಭಟ್ಟ— ನಿನ್ನ ಗತಿಯನು ನೆನೆದು ಗತಿಗೆಟ್ಟು
ನಿಂತಿಹೆನು. ನಿನ್ನ ಮಾನದ ಕಿಚ್ಚು ನನ್ನೆದೆಯ
ಸುಡುತಿಹುದು. ಕ್ಷುದ್ರ ಕೀಚಕನನ್ನು ಕಡೆಗಾಲ
ಕೊಯ್ಯುವರೆ ತಡವಿಲ್ಲ........

ಸೈರಂಧ್ರಿ [ಆತುರದಿಂದ]— ನಿನ್ನ ನೆರವೇ ಮೋಕ್ಷ!
ಕಾಪಾಡು ನನ್ನೊಡೆಯ!

ಕಂಕಭಟ್ಟ (ವಿಚಾರಮಾಡಿದವನಂತೆ)— ಪಾಂಡವರ ಬೀರಸಿರಿ
ಗುಕ್ಕಿ ಬರುತಿಹ ಕಾಲ ವಿಶಾಸಲಿರುವದು ದೇವಿ!
ನಾವಿಂದು ಕೆರಳಿದರೆ........

ಸೈರಂಧ್ರಿ (ತೀಕ್ಷ್ಣ ನೋಟದಿಂದ)— ಕೇಡೇನು ಹೇಳು ದೊರೆ?
ಭಂಡಮಾನಿಸನೊಬ್ಬ ಹೆಂಡತಿಯ ಕೆಣಕಿದರೆ
ಗಂಡನಲ್ಲವೆ ನೆರವು?

ಕಂಕಭಟ್ಟ—
ಜಗದ ಜೀವನದಲ್ಲಿ
ನಿನ್ನ ನುಡಿ ಬಾಳುವದ ಕಂಡಿರುವೆನೆಲೆ ದೇವಿ!
ನಿನ್ನವರು ಕೆರಳಿದರೆ ವನವಾಸ ಮರಳುವದು;
ಕೇಡರಳಿ ನಿಲ್ಲುವದು.

ಸೈರಂಧ್ರಿ ( ಆವೇಗದಿಂದ ) —

ಮಾನಗೇಡಿಗಳಾಗಿ
ಪಶುವಂತೆ ಬಾಳಿಳಿದು ಬಾಳುವದಕಿಂತಲೂ
ವನವಾಸ ಕೇಡೇನು ?

ಕಂಕಭಟ್ಟ— ಗಂಡುಗಲಿಗಳ ಮಡದಿ
ಗೊಪ್ಪುತಿಹ ಮಾತುಗಳು ! ನನ್ನ ನಚ್ಚಿನ ನಲ್ಲೆ !
ವನವಾಸದಿರುವಿಕೆಗೆ ಬೇಸತ್ತು ಬರುತಿರುವ
ನುಡಿಯೆಂದು ತಿಳಿಯದಿರು . ಮಾಸವೆರಡನು ಕಳೆಯೆ
ಪಾಂಡವರ ಬಿಡುಗಡೆಯು. ನಿನ್ನ ಸೇಡಿನ ಕಾಲ
ದಿನತುಂಬಿ ನಿಂತಿಹುದ ಮರೆಯದಿರು. ತೊಟ್ಟ ಪಣ
ವನು ಬಿಟ್ಟು ಕೀಚಕನ ಕೆಣಕದಿರು.

ಸೈರಂಧ್ರಿ — ಕೀಚಕನೆ
ಕೆಣಕಿದರೆ ಮುಂದೇನು ?

ಕಂಕಭಟ್ಟ (ವಿಶ್ವಾಸದಿಂದ—) ಹದಿಬದೆಯ ತೇಜದುರಿ
ದಹಿಸುವದು ಮೂರ್ಖನನು. ಭಯವಾಂತು ಬೇಯದಿರು.
ಜಾಣಮಾತುಗಳಿಂದ ನೀನವನ ಗೆಲ್ಲುವದು.
ಸೈರಂಧ್ರಿ ! ಯುಕ್ತಿಸಾಧನೆಗಳಲಿ ನುರಿತವಳು
ನೀನಲ್ಲೆ ! ನಿನಗೆನಿತು ಭಯವಿಲ್ಲ, ದೇವದೇ
ವನ ನಂಬು.

ಸೈರಂಧ್ರಿ (ಉದ್ವಿಗ್ನಳಾಗಿ)—ನನ್ನ ಮಾತುಗಳೆಲ್ಲ ಗಾಳಿಯಲಿ
ತೇಲಿದರೆ ?

ಕಂಕಭಟ್ಟ—ನಿನ್ನ ದೇವನ ಕೂಗು ! ನಿನ್ನ ಕಾ
ವನ ಕರೆದು ನಿನ್ನ ಬವಣೆಯ ತೋಡು. ರಕ್ಷಿಪನು
ಪರಮಾತ್ಮ.

ಸೈರಂಧ್ರಿ (ಬೆಚ್ಚಿ, ಕೆಣಕುವ ದನಿಯಲ್ಲಿ)—
ನನ್ನೆದುರು ನಿಂತಿರುವ ದೇವನನು

ತೊರೆದಾನು ಜೀರಾವ ದೇವರಲಿ ತೋಡಿಕೊ
ಳ್ಳಲಿ ದೇವ ! ನೀನೆನ್ನ ಮಾದೇವ ! ನೀನೆನ್ನ
ಪರಮಾತ್ಮ ! ಪತಿದೇವನೆಂಬ ನುಡಿಗರದಾಳ
ವಿಕೃತಿಯ ಮಾತೇಕೆ ನನ್ನೊಡೆಯ ?

**ಕಂಕಭಟ್ಟ** (ದೀರ್ಘವಾದ ಉಸಿರೆಳೆದು) — ನೀರಸತ
ನಾಗಿಹನು ನಿನ್ನ ದೇವನು ದೇವಿ !

**ಸೈರಂಧ್ರಿ** [ತೀರ ಹತಾಶಳಾಗಿ]— ನೀನಿಂತು
ನುಡಿಯುವೊಡೆ ಹೆಂಡತಿಯ ಗತಿಯೇನು ? ಮಾನ ವಿರ
ಹಿತಳಾಗಿ ಬಾಳಲಾರೆನು ದೇವ !

**ಕಂಕಭಟ್ಟ** (ಮಾತಾಡಲು ತೋಚದೆ)— ಶ್ರೀ ಕೃಷ್ಣ
ನೆಮ್ಮಾತ್ಮ ! ಕಾಯುವನು ಪರಮಾತ್ಮ ! ಸೈರಂಧ್ರಿ
ನೀನವನ ಮೊರೆಹೋಗು.

**ಸೈರಂಧ್ರಿ** (ಆಕ್ಕಸದಿಂದ) — ದೈವ ಹತರಾದವರು
ದೇವರನು ಕರೆಯುವರು.

**ಕಂಕಭಟ್ಟ** (ವಿಷಾದದಿಂದ)— ಸೈರಂಧ್ರಿ ! ಸೈರಂಧ್ರಿ !

**ಸೈರಂಧ್ರಿ** (ರೊಚ್ಚಿನಿಂದ)— ಕೂಗದಿರು ನೀನೊಡೆಯ ! ಕಾಲನರಮನೆಗೆಂದು
ನುಗ್ಗುವೆನು ನಾನಿಂದು.

**ಕಂಕಭಟ್ಟ**— ಧರ್ಮದಲಿ ಮನಸಿರಲಿ.

**ಸೈರಂಧ್ರಿ** (ವ್ಯಂಗ್ಯವಾಗಿ)— ನಿಮ್ಮ ಧರ್ಮದ ನೆರವು ನಿಮಗಿರಲಿ; ನನ್ನ ಬವ
ಣೆಯ ಬೀದಿ ನನಗಿರಲಿ. ಹೆಂಡತಿಯ ಕಾಯದಿಹ
ಹೇಡಿ ಗಂಡಸರಿವರು ಧರ್ಮವನು ಹೇಳುವರು.
ಗಂಡರನು ನೋಡಿಹೆನು ಕತೆಗಳನು ಕೇಳಿಹೆನು;
ಆದರೀಪರಿಯ ಷಂಢ ಗಂಡಸರನ್ನು ದಂ
ತ ಕತೆಗಳು ಕೂಡ ಬಣ್ಣಿಪುದ ಕೇಳಿಲ್ಲ; ಕಂಡಿಲ್ಲ.

(ಒಮ್ಮೆಲೆ ಹೋಗುವಳು. ಹೋಗಹೋಗುತ್ತ)

ಹದಿಬದೆಯ ಧರ್ಮವೇ ನೀನೆನ್ನ ನೆರವಾಗು !
ನಿನ್ನಭಯ ಕವಚದಲಿ ನಾನಿಂದು ನುಗ್ಗುವೆನು;
ಕೀಚಕನ ಕಾಣುವೆನು, ಹದಿಬದೆಯ ಮಾನವನು
ಕೆಣಕುವದು ತರವಲ್ಲವೆಂದಿಸಿತು ಪೇಳುವೆನು.
ಕರಮುಗಿದು ಮೊರೆಯಿಡುವೆ. ದುರುಳ ರಕ್ಕಸನವನು
ಕಿವಿ ಮುಚ್ಚಿ ಕೇಳಿದೊಡೆ ಪಾಂಡವರ ಕೂಗುವೆನು.
ಮುಗಿದಿರುವ ವನವಾಸ ಮತ್ತೆ ಬಂದರು ಸರಿಯೆ
ಗಂಡರನು ಕೆರಳಿಪೆನು. ಮಾನವಿರಹಿತವಾದ
ರಾಜ್ಯ ಸಿರಿ ಬೇಡಮ್ಮ ! ಮಾನಸಿರಿ ತುಂಬಿರುವ
ವನವಾಸವಿರಲಮ್ಮ ! (ಹೋಗುವಳು)

**ಕಂಕಭಟ್ಟ** ( ತಲೆಯ ಮೇಲಿಟ್ಟ ಕರಗಳನ್ನು ಕೆಳಗಿಳಿಸಿ ದೀನಸ್ವರದಲ್ಲಿ )
ಸೈರಂಧ್ರಿ ! ಸೈರಂಧ್ರಿ !
ಕೂಗದಿರು ಪಾಂಡವರ ! ವನವಾಸ....ಮರಳುವದು.
ಕಾಯುವನು....ಪರಮಾತ್ಮ....ಸೈರಂಧ್ರೀ ! ಸೈರಂಧ್ರೀ
( ತೆರೆ )

## ದೃಶ್ಯ ೨

[ ಕೀಚಕನ ಭೋಗಶಾಲೆ. ಸಿಂಗಾರವಾಗಿ ಕೀಚಕನು ಸೈರಂಧ್ರಿಯ ದಾರಿ ನೋಡುತ್ತಿರುವನು. ಸಿಂಹದ ಗವಿಯನ್ನು ಹೊಗುವ ಹರಿಣಿಯಂತೆ ಸೈರಂಧ್ರಿಯು ಮೆಲ್ಲ ಮೆಲ್ಲನೆ ಪ್ರವೇಶಿಸುವಳು. ]

ಸೈರಂಧ್ರಿ— ಬಾಗುವೆನು ವೀರವರ ! ಮದ್ಯವನು ತಂದಿಹೆನು.

**ಕೀಚಕ** ( ಅವಳನ್ನು ನೆಟ್ಟ ದಿಟ್ಟಿಯಲ್ಲಿ ನೋಡುತ್ತ )

ಮದ್ಯವಲ್ಲಿದು ಹುಡುಗಿ ! ಸುಧೆಯೆಂದು ಹೇಳುವದು.
ನಿನ್ನ ಕರ ತಾಕಿದೊಡೆ ಸುರೆಯೆಂಬುದೆಲ್ಲವದು
ಸುಧೆಯಾಗಿ ನಿಲ್ಲುವದು, ಹೀಗೆ ಬಾ ರೂಪಸಿಯೆ !

(ಸೈರಂಧ್ರಿಯು ಹೂಜೆಯನ್ನು ಇಟ್ಟು ದೂರ ಸರಿದು ನಿಲ್ಲುವಳು )

ಹೀಗೇಕೆ ದೂರದೂರದಿ ಸರಿದು ಭಯವಾಂತು
ನಿಲ್ಲುತಿಹೆ? ಬೆದರಿರುವ ಕಣ್ಣುಗಳು ರತ್ನಗಳ
ಹರಳುಗಳು; ಚಿನ್ನ ಬೊಂಬೆಯು ತೇಜದರಿವಾಗ
ಲೆಂದಿಂತು ನೋಟವನು ಬೀರುವೆಯ ? ಜಗದ ರೂ
ಪವ ಹೀರಿ ನಿನಗೆರಕಹೊಯ್ದಂತೆ ಕಾಣುತಿದೆ.
ಆನಂದಲಹರಿಯಲಿ ಮೈಮರೆತ ನಾಲ್ಮೊಗನ
ನಲುಮೆಯುಳಿ ಮೂಡಿಸಿತೆ ಈ ದಿವ್ಯ ಮೂರ್ತಿಯನು !
ಪರಶಿವನ ಧ್ಯಾನವನು ಭಂಗಿಸುವ ರೂಪವನು !
ಮೇಲೆ ಬಾ ಸೈರಂಧ್ರಿ ! ತಳಿರ ನಾಚಿಸುವಂಥ
ಪಾದಗಳ ದಣಿಸದಿರು. ( ಕೈನೀಡಿ ಕರೆಯುತ್ತ ಮೇಲೇಳುವನು )

ಸೈರಂಧ್ರಿ ( ಬೆದರಿ )-- ಬಾರದಿರು ವೀರವರ !
ಅರಮನೆಯ ತೊತ್ತಿನಲಿ ಭಂಡಾಟ ತರವಲ್ಲ.
ನಿನ್ನ ಘನಯೋಗ್ಯತೆಗೆ ಹೆಣ್ಣಾಳು ಸೊಗವಲ್ಲ. (ಹಿಂದೆ ಸರಿಯುವಳು,

**ಕೀಚಕ** ( ಬರಬರುತ್ತ )-- ನನ್ನ ಘನತೆಯ ಚಿಂತೆ ನಿನಗೇಕೆ ಬಾ ಬಾಲೆ
ಭೋಗದಲಿ ಯೋಗ್ಯತೆಯೆ ? ಕೀಚಕನ ಹೊಂದಿದರೆ
ನಿನಗಾರು ಸಮನಿಹರು ? ನಿನ್ನ ಭಾಗ್ಯವೆ ಭಾಗ್ಯ !

ಸೈರಂಧ್ರಿ (ತನ್ನಲ್ಲಿ)—ಭಾಗ್ಯವೀಯುವ ದೇವಿ! ನಿನ್ನ ಭಾಗ್ಯವನಿಂದು
ಎಚ್ಚರದಿ ಕಾಯುತಿರು! (ಹೊರಗೆ) ತಡೆಯುವದು ವೀರವರ!
ಕನ್ನಿಕೆಯು ನಾನಲ್ಲ.

ಕೀಚಕ (ಅವಳ ಎದುರಿಗೆ ಆಥ್ಮತೆಯಿಂದ ನಿಂತು)—ಯಾವ ತೊತ್ತಿನ ಮಡದಿ
ನೀನಾದರೆನಗೇನು? ನಿನ್ನ ರೂಪದ ಸಿರಿಗೆ
ಸೋತವನು ನಾನಲ್ಲೆ? ಸಗ್ಗವೆಣ್ಣುಗಳೆಲ್ಲ
ಸಾಲಾಗಿ ನಿಂತರೂ ಮೋಹಿಸದ ಕೀಚಕನು
ನಿನಗೊಲಿತು ನಿಂತಿಹನು........

ಸೈರಂಧ್ರಿ (ಧೈರ್ಯದಿಂದ)—ಬೆಲೆವೆಣ್ಣು ನಾನಲ್ಲ;
ಹದಿಬದೆಯ ಬಾಳುವೆಗೆ ಮಿಸಲಿರುವದು ನೋಡು
ನನ್ನ ತೊತ್ತಿನ ಬಾಳು. ಧರ್ಮವಂತನು ನೀನು
ಧರ್ಮವನು ಕಾಯುವದು. ಹದಿಬದೆಯನುಳಿಸುವದು.

ಕೀಚಕ (ಅಣಕಿನ ದನಿಯಲ್ಲಿ)—
ಹುಚ್ಚು ಧರ್ಮವು ಜಗದಿ ಹುಚ್ಚೆದ್ದು ಕುಣಿಯುವದು!
ಹದಿಬದೆಯ ಬಣ್ಣನೆಯ ನನ್ನೆದುರು ಹೇಳುವಿಯ?
ಸೈರಂಧ್ರಿ! ಜಗದಿರವ ನೋಡೊಮ್ಮೆ! ದ್ರೌಪದಿಯ
ಕತೆ ಕೇಳು! ಗಂಡೈವರ ಕಾಮುಕಾಹುತಿಯು
ಹದಿಬದೆಯು! ಕಂಡ ಗಂಡಸರೆಲ್ಲ ಗಂಡರೆ
ನ್ನುವ ಮಡದಿ ಹದಿಬದೆಯೆ ಸೈರಂಧ್ರಿ?

ಸೈರಂಧ್ರಿ (ಬೆದರಿ) (ತನ್ನಲ್ಲಿ)— ಗುಟ್ಟನರಿ
ತಿಹನೇನೋ ದುಷ್ಟನಿವ? ಕೆರಳಿಸುವ ನುಡಿಗಳನು
ಬೇಕೆಂದು ನುಡಿಯುವನೊ ನಾನರಿಯೆ. (ಹೊರಗೆ) ದ್ರೌಪದಿಯ
ಮಾತೇಕೆ ವೀರವರ! ನನ್ನ ಬಾಳಿನ ಪರಿಯ
ನಾನಂತು ಹೇಳಿದೆನು. ಮೇಲಾಗಿ ಅಗ್ನಿ ಸಾ
ಕ್ಷಾತ್ರಿರಲು ಗಂಡರೈವರನವಳು ಮದುವೆಯಾ
ಗಿಹಳೆಂದು ಕೇಳಿರುವೆ. ನನಗೇಕೆ ಅವಳಿರವು?
ಹದಿಬದೆಯ ಕಾಯುವದು ವೀರವರ! ಮಾನಿನಿಯ

ಹೊತ್ತೊಯ್ದ ರಾವಣನು ತ-ಲೆ-ಯ....ತ್ತ. ನೀನಂತು
ಧಾರ್ಮಿಕನು. ನೆರಗೊಡ್ಡಿ ಬೇಡುವೆನು ಹೋಗಗೊಡು
ವೀರವರ! ( ಹೋದಂತೆ ಮಾಡುವಳು )

**ಕೀಚಕ** ( ಕಾಮಾತುರನಾಗಿ, ಕೈಹಿಡಿದು )—ನಿನ್ನ ನೆರಗನುಸರಿಸಿ ರಮಿಸುತಿಹ
ನಾನಿರಲು ನೀನೇಕೆ ನೆರಗೊಡ್ಡಿ ನಿಲ್ಲುತಿಹೆ.
ರಾವಣನ ಕತೆಹೇಳಿ ಕೀಚಕನ ಬೆದರಿಸಲು
ಬಾಯ್ಬಿಡುವ ಜವ್ವನೆಯೆ! ಸಗ್ಗಲೋಕವ ಚಿಮ್ಮಿ
ನಿಂತಿಹೆನು ನಿನಗಾಗಿ, ಬೇಗ ಬಾ ಸೈರಂಧ್ರಿ.
( ಕೈ ತನ್ನೆಡೆಗೆ ಎಳೆಯುವನು )

**ಸೈರಂಧ್ರಿ** ( ಕೈ ಕೊಸರಿಕೊಳ್ಳುತ್ತ )—
ನರಕದಲಿ ಬಾಳುತಿಹ ಹುಳುಗಳಿರ! ಹುಳಿತ ನಾ
ಲಗೆಯನ್ನು ಮೀಯಬಾರದೆ ಬಂದು. ಕೈಯ ಬಿಡು!
ಕೈಯಬಿಡು! ಕೀಚಕನ ಕಾಮನೆಗೆ ಸುಲಭದಲಿ
ಸೋಲುತಿಹ ಹೆಣ್ಣೆಂದು ತಿಳಿಯದಿರು. ನಡೆಯತ್ತ
ಉನ್ಮತ್ತ!
( ಕೈ ಕೊಸರಿಕೊಂಡು ಓಡಿಹೋಗುವಳು. ಕೀಚಕನು ಹರಡಿದ ಕೂದಲುಗಳನ್ನು ಗಟ್ಟಿಯಾಗಿ ಹಿಡಿದು )

**ಕೀಚಕ**— ಜಂಭವೇಕಲೆ ಹೆಣ್ಣೆ! ಕೀಚಕನ
ಮಂದಿರವು ಭೋಗಪುರದಾಲಯವು! ಸೈರಂಧ್ರಿ!
ಮಂದಿರವ ಹೊಕ್ಕವಳು ಕೀಚಕನ ಸೇವಕಳು;
ಹಟಹಿಡಿದು ಕೆಡಬೇಡ ನಲಿವಾಂತ ನಲವೆಣ್ಣೆ
ಕೀಚಕನ ತೃಪ್ತಿಯಲಿ ನಿನ್ನ ಬಿಡುಗಡೆಯಿಹುದು
ಮರೆಯದಿರು ಬಲುಜೋಕೆ! ಕೆಣಕಿದರೆ ಕೇಡಿಹುದು.
( ಹಿಡಿತವನ್ನು ಬಿಗಿಯಾಗಿ ಹಿಡಿಯುವನು )

**ಸೈರಂಧ್ರಿ** ( ಆರ್ತಸ್ವರದಿಂದ )—
ಹದಿಬದೆಯ ಧರ್ಮವೇ! ನೀನೆಲ್ಲಿ ಮಲಗಿರುವೆ?

**ಕೀಚಕ** ( ಗಹಗಹಿಸಿ ನಗುತ್ತ )—ಸಿಂಗಾರವಾಗಿರುವ ಸಜ್ಜೆವನೆಯಲಿ ಧರ್ಮ
ಮಲಗಿಹುದು ನೋಡೇಳು! ( ಅವಳನ್ನು ಎಳೆದು ಕೈಬಿಡುವನು. )

ಸೈರಂಧ್ರಿ ( ಮೇಲೇಳುತ್ತ )— ಕ್ಷುದ್ರಕೀಟಕ ನೀನು.
ದೂರಸರಿ ಪಾಪಾತ್ಮ ! ದೋಷಿಗಳ ದಂಡಿಸಲು
ಪರಮಾತ್ಮನಿರುತಿಹನು. ನೀನಂತು ಪಾಪಾತ್ಮ,
ಪಾಪಿಗಳ ದಂಡಿಸಲು ಪರಮಾತ್ಮ ಬೇಕಿಲ್ಲ.
ನನ್ನ ಗಂಡನ ಕೂಗಿ ನಿನ್ನ ತಲೆ ಸೀಳುವೆನು.

( ಒಮ್ಮೆಲೆ ಓಡಿಹೋಗುವಳು, ಭದ್ರವಾಗಿಕ್ಕಿದ ಕದಗಳನ್ನು ಕಂಡು ಬೆದರುವಳು. ಹುಚ್ಚಳಂತೆ ಸುತ್ತಲೂ ಓಡಾಡುವಳು. ಕಡೆಗೆ ನಿರಾಶೆಯಾಗಿ ಸೋತ ಹೆಜ್ಜೆಯಲ್ಲಿ ಹಿಂತಿರುಗಿ ಬರುವಳು. )

ಕೀಚಕ ( ನಗುತ್ತ )—ನಿನ್ನ ಗಂಡನ ಕೂಗು ! ನಿನ್ನ ದೇವನ ಕರೆದು
ಬಿಡುಗಡೆಯ ಬೇಡಲ್ಲ ! ಮಲಗಿದಲಿ ಮೈಮರೆತು
ಕಾಯಲೊಲ್ಲದೆ ನಿನ್ನ ಹದಿಬದೆಯ ಹಿರಿಧರ್ಮ ?
ಎಲೆ ಮೂಢ ಜವ್ವನೆಯೆ ! ಕೀಚಕನ ಕೆರಳಿಸುವ
ದೇವನೆಂಬವನಿಹನೆ ? ಗಾಳಿಮಾತುಗಳೇಕೆ
ಕೀಚಕನ ಹೊಂದು ಬಾ. ನಿನ್ನ ಭೋಗವನುಳಿದು
ಚಣವೊಂದು ಕಳೆಯುವದು ಯುಗಗಳನು ಕಳೆದಂತೆ.
ನಿನ್ನ ರೂಪದ ನಂಜು ನನ್ನೆದೆಯನೇರಿಹುದು
ಕಾಮಾಗ್ನಿಯಿಂದೆದೆಯು ಸುಡುತಿಹುದು ನೋಡಬಲೆ
ನಿನ್ನಧರ ತನಿಸೊದೆಯು ನನ್ನೆದೆಯ ತಣಿಸುವುದು
ಭರದಿಂದ ಬಿಗಿದಪ್ಪು ಕಾಮುಸಿರಿ ಸಂಪನ್ನೆ.

( ಉನ್ಮತ್ತನಂತೆ ಮುಂದೆ ಹೋಗುವನು. )

ಸೈರಂಧ್ರಿ ( ವಿಚಾರಮಾಡಿದವಳಂತೆ ಅಭಿನಯಿಸಿ, ಹಸನ್ಮುಖಿಳಾಗಿ )—
ತಡೆಯುವದು ವೀರವರ ! ಬೇಡುವೆನು ನಿನಗಾಗಿ
ನಟನೆಯಾಟವ ಹೂಡಿ ನಿಮ್ಮೆದೆಯ ನೋಯಿಸಿದೆ
ಬೇಕೆಂದು ಕೋಪವನು ಅಭಿನಯಿಸಿ ತೋರಿದೆನು
ನೀನೆನ್ನ ಕ್ಷಮಿಸುವದು. ( ಮುಗುಳು ನಗೆಯೊಡನೆ ನಮಿಸುವಳು. )

ಕೀಚಕ (ಮತ್ತನಾಗಿ)— ನಲುನಗೆಯ ಸಸಿಮೊಗಳೆ!
ನೀನೆನಿತು ಚೆಲುವಾಗಿ ಕಾಣುತಿಹೆ. ನನಗಾಗಿ
ಬೇಯುದಿರು. ಪ್ರಣಯಕಾಲದ ರೋಷ ಪ್ರಣಯಿಗಳ

ಮೋಹಾಸ್ತ್ರವೆಂಬುದನ್ನರಿತಿಹೆನು. ಹೊಸ ನಗೆಯ
ಹೊಳಪಿನಲಿ ತೊಳತೊಳಗಿ ಬೆಳಗುತಿಹ ಹೊಸ ಹುಡುಗಿ !
ಹಸಿವಾಂತು ನಿಂತಿರುವ ಮದುಮಗನ ತಣಿಸು ಬಾ !
ಬಾ ಬೇಗ ರೂಪರಾಶಿ !

ಸೈರಂಧ್ರಿ ( ಧೈರ್ಯದಿಂದ )— ಭೋಗದಾಸೆಯ ಮೇಲೆ
ಮನವಿಟ್ಟ ವೀರವರ ! ಭೋಗ ಸವಿಯಾಗುವದು
ಹೆಣ್ಣೊಲಿದ ಮೇಲೆಂದು ಭೋಗದಲಿ ಮುಂತಿರುವ
ನಿನಗಾನು ಹೇಳುವದು ಸರಿಯಲ್ಲ. ಇಂದೇಕೋ
ಬಳಲಿಹೆನು. ವರವೊಂದು ಬೇಡುವೆನು. ನೀಡುವೆಯ ?

ಕೀಚಕ ( ಆನಂದದ ಆವೇಗದಲ್ಲಿ )—ಹತ್ತು ಸಾವಿರಗಳನು ಸಲ್ಲಿಸಲು ಸಿದ್ಧನಿಹೆ
ಬೇಗ ನುಡಿ. ನೀನೊಲಿದ ಬಾಯ ನುಡಿಯಿಂಚರವ
ಕೇಳುವೆನು.

ಸೈರಂಧ್ರಿ ( ವಿನಯದಿಂದ )—ಕರುಣಾಳೆ ! ನಿನ್ನ ಕರುಣೆಯ ನಂಬಿ
ಕೇಳುವೆನು. ದಯದೋರಬೇಕಿಂದು.

ಕೀಚಕ ( ಆತುರನಾಗಿ )— ಬೇಗ ನುಡಿ !

ಸೈರಂಧ್ರಿ ( ಲಜ್ಜೆಯನ್ನು ಅಭಿನಯಿಸುತ್ತ )—
ನಾಳೆ ರಾತ್ರಿಯ ದಿನವೆ ನಾ ನಿನ್ನ ಸೇರುವೆನು.
ಕಾಲಪರಿಮಿತವೇನು ಬಹುವಲ್ಲ ನೋಡೊಡೆಯ
ನೀನಂತು ಕರುಣಾಳು.

ಕೀಚಕ ( ಸಂತೋಷದಿಂದ )— ನಿನ್ನ ಬರವನೆ ನಂಬಿ
ಸಜ್ಜೆವನೆ ಸಿಂಗರಿಸಿ ನಿನಗಾಗಿ ಕಾಯುವೆನು
ತಪ್ಪದಿರು ನಲವೆಣ್ಣೆ ! ನಿನ್ನೊಲವನುಳಿದಾನು
ಚಣಕಾಲ ಬಾಳದಿಹೆ.

ಸೈರಂಧ್ರಿ ( ವಿಶ್ವಾಸವನ್ನು ತೋರಿಸುವಂತೆ )—ತಪ್ಪಿದರೆ ತಲೆದಂಡ !
ನಿನಗದರ ಚಿಂತೆಯೇ ! ಇನ್ನೊಂದು ನುಡಿಯಿಹುದು
ಕೇಳುವರೆ ಹೇಳುವೆನು

ಕೀಚಕ ( ಆತುರನಾಗಿ )— ನಿನ್ನ ನುಡಿಯಿಂಚರಕೆ
ಕಿವಿ ತೆರವು, ತೆರವಾಗಿ ನಿಂತಿಹವು ಬೇಗ ನುಡಿ.

ಸೈರಂಧ್ರಿ ( ಒಯ್ಯಾರವನ್ನು ಅಭಿನಯಿಸುತ್ತ )
ಮಲ್ಲ ಕೀಚಕನನ್ನು ಮೋಹಿಸಿದ ಜವ್ವನಿಯು
ಮಲ್ಲಸಾಲೆಯಲವನ ಕೂಡಬೇಕೆನ್ನುವಳು.
ನನಗಂತು ಹಟವಿಲ್ಲ. ದಯದೋರಿದೊಡೆ ಲೇಸು.

ಕೀಚಕ ( ನಗುತ್ತ )
ಒಪ್ಪಿದೆನು ನನ್ನೊಲವೆ! ನಿನಗಾಗಿ ಮಲ್ಲಸಾ
ಲೆಯ ನಾಳೆ ಸಿಂಗರಿಸಿ ಕಾಯುವೆನು. ತಪ್ಪದಿರು
ಸೈರಂಧ್ರಿ! ( ಬೆನ್ನು ಚಪ್ಪರಿಸಿ ಹೋಗಗೊಡುವನು. )

ಸೈರಂಧ್ರಿ (ನಮಸ್ಕರಿಸಿ) —ಹೋಗಿಬರುವೆನು ದೊರೆಯೆ. ಕಾರುಣ್ಯ
ಮಯು ನೀನು. ( ಮತ್ತೊಮ್ಮೆ ಬಾಗಿ ಹೋಗುತ್ತಿರಲು )

ಕೀಚಕ ( ನೆನಪಾದವನಂತೆ ) -ಸೈರಂಧ್ರಿ! ಮಲ್ಲಸುಂದಿರವೆಲ್ಲಿ?
ಬೀದಿಯನು ಬಲ್ಲೆಯಾ?

ಸೈರಂಧ್ರಿ ( ಸಮಾಧಾನದಿಂದ )— ಬಲ್ಲವನ ಕರೆತರುವೆ.
ನೀನವನು ಚಿಂತಿಸದೆ ಕಾಯುತಿರು ನನಗಾಗಿ.
ಸೇವಕರನಿರಿಸದಿರು ಮಲ್ಲಸಾಲೆಯಲಂದು
ಜೊಂಜಾಟ ತರವಲ್ಲ. ಹೋಗುವೆನು ವೀರವರ!
ಕಾರುಣ್ಯಮಯ ನೀನು........ ( ಹೋಗಹತ್ತುತ್ತ )
ಪರಮಾತ್ಮ! ಪರಮಾತ್ಮ!
ಪಾಂಡವರ ಮಾನವನು ಎಚ್ಚರದಿ ಕಾಯುತಿರು.
ಕುಲದೇವಿ! ನಿನ್ನ ಕುಲಕನ್ನಿಕೆಗೆ ಬಲವಿತ್ತು
ನೆರವಾಗು. ನನ್ನ ಯೋಜನೆಗಳಲಿ ನಿನ್ನ ಚಲ
ವನು ತುಂಬು. ನಿನ್ನ ಬಲದೊಳಗೆನ್ನ ಸಾಹಸವು
ತೇಲುತಿದೆ. ನೀನೆನ್ನ ಕೈವಾರಿ, ಕುಲದೇವಿ.
( ಒಮ್ಮೆಲೆ ಹೋಗುವಳು )

( ಕೀಚಕನು ಉನ್ಮತ್ತನಂತೆ ಗಹಗಹಿಸಿ ನಗುತ್ತಿರುವಾಗ )
— ತೆರೆ —

## ದೃಶ್ಯ ೩

[ ಬೆಳದಿಂಗಳಲ್ಲಿ ಸೈರಂಧ್ರಿಯು ಅರಮನೆಯ ಕಡೆಗೆ ಹೊರಟಿದ್ದಾಳೆ. ಮುಖದ ಮೇಲೆ ವಿಚಾರತರಂಗಗಳೆದ್ದ ಭಾವ ಮೂಡಿದೆ. ಅವಮಾನದ ಕ್ರೋಧವು ಆಗಾಗ ಕಣ್ಣುಗಳಲ್ಲಿ ಮಿಂಚುತ್ತಲಿದೆ. ]

ಸೈರಂಧ್ರಿ (ಸುದೀರ್ಘವಾದ ನಿಟ್ಟುಸಿರನ್ನೆಳೆದು)—

ಕಾಲಚಕ್ರದ ಸುಳಿಗೆ ಸಿಕ್ಕಿರುವ ಚಂದಿರನೆ
ತಡೆತಡೆದು ಸಾಗುತಿರು; ನಿನ್ನ ಕುಗ್ಗಿದ ಗತಿಯು
ನನ್ನ ಕಾರ್ಯದ ನೆರವು. ನಾಳೆ ರಾತ್ರಿಯ ವರೆಗೆ
ಕಾಲಪರಿಮಿತವಕಟ! ನಾನೆಂತು ಕಾಳಿರುಳ
ನೂಕುವೆನೊ ನಾನರಿಯೆ. ದುರಿತಗಳ ಮಧ್ಯದಲಿ
ಕಯ್ಪಿಡಿದು ಕಾಯುತಿಹ ಪಾಂಡವರ ಪರಮಾತ್ಮ !
ನನ್ನ ಯೋಜನೆಗಳಿಗೆ ನಿನ್ನ ಬೆಂಬಲವಿರಲಿ.
ಅಕಟಕಟ ! ದುರುಳ ದುಶ್ಶಾಸನನು ಹಿಂದೊಮ್ಮೆ
ಮುಡಿಹಿಡಿದು ನೋಯಿಸಿದ ಹಿಡಿತವನು ಮತ್ತೊಮ್ಮೆ
ನೆನೆವಂತೆ ಮಾಡಿದನು ಕೀಚಕನು. ಹೆಣ್ಣ ಸಹ
ನೆಯ ಗಡಿಗೆ ಸೀಮೆಗಲ್ಲೊಂದುಂಟು. ತಾಳಿಕೆಗೆ
ಮಿತಿಯುಂಟು. ಅವಮಾನ ದಾವಾಗ್ನಿ ಕಳಕಳಿಸಿ
ನಿಂತಿಹುದು. ನನ್ನೆದೆಯ ಸೀಯುವದು. ನನ್ನ ಕೆಣ
ಕಿದ ನರನ ಕೆನ್ನೀರ ಪಸಿಯೊಂದೆ ಬೆಂದೊಡಲ
ತಣಿಸುವದು. ( ಏನೋ ನೆನಪಾದವಳಂತೆ ) ಧರ್ಮವನು
ಬೋಧಿಸುವ ಧರ್ಮವಂ—
ತರು ಬೇಡ. ಕರ್ಮದುರಿಯಲಿ ಬೆಂದು ಕೆಣಕಿದರೆ
ಸಿಡಿಯುತಿಹ ಗಂಡುಗಲಿಗಳು ಬೇಕು. ಧರ್ಮಜನ
ಬೇಡಿದರೆ ದೇವರನು ತೋರಿದನು. ಉಳಿದ ಗಂ
ಡರ ಹಾಡನೇನೆಂದು ಬಣ್ಣಿಸಲಿ ? ಅಣ್ಣನಾ
ಜ್ಞಾಪಾಶ ಬಂಧಿತರು ಸೋದರರು. ( ರೊಚ್ಚಿನಿಂದ ) ಹೆಣ್ಣ ಹರಿ
ಬವ ಸಾರಿ ಗಂಡರನು ಕೇಳಿಸನು ಸೇಡು ! ಸೇ

ಡೆಲೆ ಸೇಡು! ಸೇಡಿನಲಿ ಸೋಗವಾಂತು ಜೀವಿಪಳು
ದ್ರೌಪತಿಯು. ಸೇಡುದುಂಬುವ ಮುನ್ನ ಸಿಡಿದು ಹೋ
ದರು ಸರಿಯೆ ಕೀಚಕನ ಕೊಲ್ಲುವೆನು. ಎಲೆ ಘೋರ
ಪಾತಕಾ! ನಿನ್ನ ನೆತ್ತರಿನೆಡೆಗೆ ಹಸಿವಿಹಳು
ರಣದೇವಿ. ದುರುಳ ದುರ್ಯೋಧನನ ನೆತ್ತರಿಳಿ
ಯುವ ಮುನ್ನ ನಿನ್ನೆಡೆಯ ನೀಡುವೆನು. ಶಾಂತಳಾ
ಗೆಲೆ ಚಂಡಿ! ರಣಚಂಡಿ ನೀನಹುದು! ಕೌರವನ
ನೈವೇದ್ಯ ತಡವಾಗಬಹುದೆಂದು ಕೀಚಕನ
ಚಿಕ್ಕೆಡೆಯ ನೀಡುವೆನು ನಿನಗಿಂದು.

(ನಿರ್ಧಾರದಿಂದ ಮುಂದೆ ಸಾಗುವಷ್ಟರಲ್ಲಿ ಸುಧೇಷ್ಣೆಯು ಓಡಿಬಂದು)
ಸೈರಂಧ್ರಿ!

ಸುಧೇಷ್ಣೆ—ನಿನ್ನ ರವ ನೋಡಿದರೆ ಭೀತಿಗಾಸರವಮ್ಮ
ಕೀಚಕನ ಮಂದಿರದಿ ಕೇಡಾಯಿತೇನಮ್ಮ!
ಬೇಗ ನುಡಿ ಸೈರಂಧ್ರಿ! ಕಂಕಭಟ್ಟರ ನುಡಿಗೆ
ಬೆಚ್ಚಿ ಬಂದಿಹೆ ನಾನು. ನಯವಿಹೀನಳು ನಾನು
ನಿನ್ನನೇ ಕಳುಹಿದೆನು.

ಸೈರಂಧ್ರಿ (ಕರುಣಸ್ವರದಲ್ಲಿ)— ನಮಿಸುವೆನು ದೇವಿಯರೆ!
ಸೇವಕಿಯ ರಕ್ಷಿಪುದು. ನಿಮ್ಮ ನೆರವನೆ ನಂಬಿ
ನಿಂತಿಹೆನು ನನ್ನೊಡತಿ, ನನಗೊಳಿತು ಮಾಡುವದು.
ಬನ್ನ ಮಡುವಲಿ ಸಿಕ್ಕು ಬವಣೆಗೊಂಡಹೆ ತಾಯೆ!

ಸುಧೇಷ್ಣೆ (ಆತುರಳಾಗಿ)—ಬಂದ ಬನ್ನವನುಸಿರು! ಚಿಂತೆಗಾಸರವೇಕೆ
ಸೈರಂಧ್ರಿ! ಬಲವಂತನಾದರೂ ಕೀಚಕನು
ಕಿರಿ ತಮ್ಮ, ನನ್ನ ನುಡಿಗಳ ಮೀರಿ ನಡೆದಿಲ್ಲ
ಕೀಚಕನು.

ಸೈರಂಧ್ರಿ— ನಿನ್ನ ವಂಶದ ಕುಡಿಯು ಮರವಾಗ
ಲಮ್ಮ! ಹೆಣ್ಣನುಳಿಸಿದ ಪುಣ್ಯ ನಿನ್ನದಾಗಲಿ.
ಮಹಾರಾಣಿ! ಮದ್ಯಪಾತ್ರೆಯನಿಟ್ಟು ಮರಳುತಿರೆ
ಕೀಚಕನು ಕಿಲ್ಮಿಷವ ತೋರಿದನು. ತೊತ್ತಿನಲಿ

ಈ ರೀತಿ ತರವಲ್ಲ ಬೇಡೆಂದು ಪಲವಾಗಿ
ಬೇಡಿದೆನು. ಕೈಮುಗಿದು ಕೇಳಿದೆನು. ನುಡಿಗಳಿಗೆ
ಕಿವುಡಾದ ಪರಿಯೆನಿತು ಕೇಡಮ್ಮ! ಕಾಮುಕನ
ಕಾಮದುರಿ ಮಿಗಿಲಾಯಿತೆಂಬುದನು ನುಡಿಯಿಂದ
ತೋರಿದನು, ಗಾಸಿಮಾಡಿದನಮ್ಮ! ಮುಡಿಹಿಡಿದು
ಜಗ್ಗಿದನು, ಬಿಡುಗಡೆಯ ಕಾಣದೆಯೆ ರಂಬಾಟ
ಮಾಡಿದೆನು. ಕಡೆಗೊಮ್ಮೆ ಹುಸಿನಗೆಯ ಹೊರಳಿಸುತ
ನಾಳೆ ರಾತ್ರಿಯವರೆಗೆ ಬಿಡುಗಡೆಯ ಬೇಡಿದೆನು.
ಹೆಣ್ಣೊಲಿಯಿತೆಂದೇನೊ ನಾನರಿಯೆ ದೇವಿಯರೆ
ಒಪ್ಪಿದನು ಕೀಚಕನು. ನಾಳೆ ರಾತ್ರಿಯ ನೆನವು
ನವಿರನೆಬ್ಬಿಸುತಿಹುದು. ನೀನೆನ್ನ ಗತಿಗಾಗು
ಮಾರಾಣಿ! ನಿನ್ನ ಜಾತಿಯ ನೋವು ನಿನಗಿರಲಿ
ನನ್ನೊಡತಿ. ನಿರ್ಗತಿಕಳಾಗಿರುವ ಹೆಣ್ಣಾನು
ನೋಡಮ್ಮ! ( ದೈನ್ಯವನ್ನು ತೋರಿ ನಮಿಸುವಳು. )

**ಸುಧೇಷ್ಣೆ** ( ಎಬ್ಬಿಸುತ್ತ )—ನಿನಗೆನಿತು ಭಯವಿಲ್ಲ ಸ್ಪಷ್ಟವಾ
ಗಿರು ದಾಸಿ! ನಾನವನ ಕಾಣುವೆನು. ನಿನ್ನಾಸೆ
ತೊರೆಯೆಂದು ದೃಢವಾಗಿ ಹೇಳುವೆನು. ನಾನೆಳೆದ
ಗೆರೆದಾಟಿ ಬದುಕಲಾರನು ತಮ್ಮ! ನಂಬೆನ್ನ
ಸೈರಂಧ್ರಿ. ನೀನೆನ್ನ ಸೇವಕಳು, ನಿನಗೇಕೆ
ಭಯವಮ್ಮ? ( ಅವಸರದಿಂದ ಹೋಗುವಳು ).

**ಸೈರಂಧ್ರಿ** (ಅವಳನ್ನೇ ನೋಡುತ್ತ )—ಹಂಚಿಕೆಯ ಹದನವ್ರೋ ನಿಜವ ನುಡಿ
ದಳೊ ದೇವಿ ನನಗಂತು ತಿಳಿಯದಿದೆ. ಒಂದೆ ಕುಲ
ದವರಿವರು ನಂಬಿದರೆ ಕೇಡಿಹುದು. ಇವಳಿರವು
ನನಗೇಕೆ? ನನ್ನಿರವೆ ನನಗಿಹುದು. ನನ್ನ ಯೋ
ಜನೆಗಳಿಗೆ ನನ್ನ ಸಾಹಸದುಂಬಿ, ದೇವಬಲ
ವನು ನಂಬಿ, ನಾನಂತು ನುಗ್ಗುವೆನು. ಕಾಯುವನು
ಪರಮಾತ್ಮ! ಅವನೆನ್ನ ಜೀವಾತ್ಮ!

( ಹೋಗುವಳು. )

## ದೃಶ್ಯ ೪

[ ಅರಮನೆಯ ಹಿಂಭಾಗದಲ್ಲಿರುವ ಬೃಹನ್ನಳೆಯ ಕೋಣೆ. ಬೃಹನ್ನಳೆಯು ಒಂದು ಹರಕು ಕಂಬಳಿಯನ್ನು ಹೊಪ್ಪುಕೊಂಡು ಹರಕುಚಾಪೆಯ ಮೇಲೆ ಮಲಗಿರುವಳು. ಮಿಣುಕು ದೀಪವೊಂದು ಅಲ್ಲಿಯೇ ಉರಿಯುತ್ತಿರುವದು. ಸೈರಂಧ್ರಿಯು ಮೆಲ್ಲನೆ ಪ್ರವೇಶಿಸುವಳು. ]

ಸೈರಂಧ್ರಿ ( ಕಣ್ಣೀರು ತುಂಬಿ )—

ಮೂರು ಲೋಕದ ಗಂಡನೊರಗಿರುವ ಪರಿಯೆನಿತು
ಕರುಣವನು ಬೀರುವದು ! ಚಾಂಡಾಲ ದೈವವೇ !
ಹಂಸತಲ್ಪದ ಮೇಲೆ ಪವಡಿಸುವ ದೊರೆಗಿಂದು
ಹರಕು ಚಾಪೆಯ ಹಾಸು ನಿದ್ರಿಸಲು ನೆರವಾಯ್ತೆ ?
ದೈವ ಮೊಗದಿರುವಿದರೆ ಗತಿಯೆನಿತು ಕೇಡಮ್ಮ !

( ಕಣ್ಣೀರ ಕೊಡವಿ ಹತ್ತಿರ ಹೋಗಿ ಅಲುಗಾಡಿಸುತ )

ಏಳೇಳು ! ಎನ್ನೆರೆಯ ! ನಿದ್ದೆ ತೊರೆದೆದ್ದೇಳು !
ನಿನ್ನವಳು ಬಂದಿಹಳು ನಿನ್ನ ನಚ್ಚಿನ ಮಡದಿ.

ಬೃಹನ್ನಳೆ [ ಒಮ್ಮೆಲೇ ಮೇಲೆದ್ದು ಆಶ್ಚರ್ಯದಿಂದ ]—

ಪಾಂಚಾಲಿ ! ನೀನೇತಕೀವೇಳೆ ಕನಸೊಡೆದು
ಬಂದಂತೆ ಬಂದಿರುವಿ ? ತಲ್ಲಣವನಾಂತಿರುವ
ಮೊಗದಿರುವ ಭಾವಿಪೊಡೆ ಭಯವೆದ್ದು ಕುಣಿವಂತೆ
ಕಾಣುತಿದೆ. ಬಂದ ಬನ್ನವದೇನು ?

ಸೈರಂಧ್ರಿ ( ನಿರಾಶೆಯ ಸ್ವರದಲ್ಲಿ )— ಬನ್ನಗಳು

ದ್ರೌಪದಿಯ ಮೈಗಂಟಿ ನಿಂತಿರುವ ತೊಡವುಗಳು
ಎನ್ನೆರೆಯ ! ನಿಮಗಾವ ಸೊಗವೆಂದು ನನ್ನೊಲವ
ಬಯಸಿದಿರೊ ನಾನರಿಯೆ; ಪಾಪಿ ಜನುಮವನಪ್ಪಿ
ವನವಾಸ ಹೊಂದಿದಿರಿ.

ಬೃಹನ್ನಳೆ (ದುಗುಡದಿಂದ)— ಬಗೆ ಕದಡಿ ಹೊಮ್ಮುತಿಹ
ನುಡಿಗಳಿವು ಪಾಂಚಾಲಿ! ಪಾಂಡವರ ಕೀಳ್ಪಿನೆಂಯು
ಕಾರಣಳು ನೀನಲ್ಲ: ವಿಧಿಯಿತ್ತ ಭಾಗ್ಯವದು.
ಸಂದ ಮಾತಂತಿರಲಿ ಬಂದ ಬನ್ನವನರುಹು.

ಸೈರಂಧ್ರಿ (ನಡುಗುವ ಸ್ವರದಲ್ಲಿ)—
ಗೋಳು ಗೋಳ್ಗೆ ನಲ್ಲ! ಹೆಣ್ಣ ಬಾಳಿನ ಗೋಳು
ಹದಗೆಟ್ಟು ನಿಂತಿಹುದು. ನನ್ನ ರೂಪದ ನಂಜಿ
ನುರಿಯೇರಿ ಕೀಚಕನು ಕೀಳ್ಮನವ ತೋರಿದನು
ಅಪದೆಶೆಯನೆಸಗಿದನು. ಮಾನವಿರಹಿತಳಾಗಿ
ನಾನೆಸಿತು ಕಾಲವನು ನೂಕುವದು ನನ್ನೊಡೆಯು!
ಗಂಡೈವರ ಬಲದಿ ಬಾಳುವಳು ನಾನಲ್ಲೆ?
ಪುಂಡ ಗಂಡನದೊಬ್ಬ ಹೆಂಡತಿಯು ಕೆಣಕಿದರೆ
ಪಂಡನಲ್ಲದೆ ಸುಮ್ಮನಿರುತಿಹನೆ ಗಂಡನೆಂ
ಬುವ ಜೀವಿ? ಮೂರು ಲೋಕದ ಗಂಡ! ನೀನೆನ್ನ
ಕಾಯುವದು, ಮಾನಿನಿಯನುಳಿಸುವದು.

[ ಅವನ ಎದೆಯ ಮೇಲೆ ಮುಖವನ್ನಿಟ್ಟು ಕಣ್ಣೀರು ಸುರಿಸುವಳು ]

ಬೃಹನ್ನಳೆ (ಪರಿತಾಪದಿಂದ)— ಶಾಂತಳಾ
ಗೆಲೆ ದೇವಿ! ಕಣ್ಣೀರ ಕೊಡವದಿರು. ಬಿಸಿಯುಸಿರ
ಸೂಸದಿರು. ನಿನ್ನೊಂದು ಪಸಿಯೆನ್ನ ಕಣ್ಣುಗಳ
ತಿವಿಯುವದು. ನನ್ನೆದೆಯ ಮಾಟುವದು. ಸಿಟ್ಟುಸಿರ
ಝಳ ತಾಕಿ ಕತಕತನೆ ಕುದಿಯುತಿದೆ ನನ್ನ ನರ
ಗಳ ರಕುತ, ಪಾಂಡವರ ಪರಿಕಿಸುವ ಸಮಯವಿದು.
(ಉಗ್ರನಾಗಿ) ಉನ್ಮತ್ತ ಕೀಚಕಾ! ಮಾರಿಗೌತಣವಿತ್ತು
ಮಾನಿನಿಯ ಕೆಣಕಿದೆಯೋ! ಹದಿಬದೆಯ ಕೆರಳಿಪುದು
ಮರೆತು ಮಲಗಿದ ವಿಧಿಯ ಗುರುತಿಟ್ಟು ಕರೆದಂತೆ!
ಸಂಚಕಾರವನಿತ್ತು ಯಮಪುರಿಯ ಕೊಂಬಂತೆ!
ಪಾಂಚಾಲಿ! ನೀಚರಕ್ಕಸನಿವನ ಕರುಳುಗಳ

ಕೊರೆಕೊರೆದು ನಾಯಿಗಳಿಗೆಸೆಯುವೆನು. ನೆತ್ತರಿನ
ಹೊಳೆಹರಿಸಿ ಕಾಮುಕನ ಹಿಂಡುವೆನು. ಪುಟಚೆಂಡು
ನೆಗೆವಂತೆ ರುಂಡವನು ಚಂಡಾಡಿ ದಿಂಡನುರು
ಳಿಸಿಬಿಡುವೆ. ಗಂಟಲವ ಕಡಿಕಡಿದು ಉಸಿರ ನಿ
ಲ್ಲಿಸಿ ಬಿಡುವೆ. ನಂಬು ನಂಬೆಲೆ ನಂಬು ನಂಬೆನ್ನ
ಪಾಂಚಾಲಿ ! ಕೀಚಕನ ತುಡುಕುವೆನು; ಸದೆಬಡಿದು
ಬಾಳುವೆನು, ಗಂಡುಗಲಿಗಳ ನೆರವು ನಿನಗಿಹುದ
ನೀ ಬಲ್ಲೆ; ನಿನಗೇಕೆ ಭಯ ನಲ್ಲೆ ?

**ಸೈರಂಧ್ರಿ** ( ತನ್ನಲ್ಲಿ )— ಹೃದಯವೆ !
ಹಿಗ್ಗದಿರು. ಭರವಸೆಯ ನೌಕೆಯಲಿ ವ್ಯೆಮರೆತು,
ತೇಲದಿರು. ( ಹೊರಗೆ ) ನಂಬಿಹೆನು ನನ್ನೊಡೆಯ; ನಿನ್ನನೇ
ನೆಚ್ಚಿಹೆನು. ಕೀಚಕನ ಕೊರಳರಿದು ಕಂಟಕವ
ಕೀಳೊಡೆಯ. ನೀನೊವ್ಮೆ ಕಣ್ದೆರೆಯಲುಳಿಯುವನೆ
ಪಾಪಾತ್ಮ ? ಮೂಲೋಕಪತಿ ನೀನು. ನಿನಗವನು
ಪಾಸಟಿಯೆ ? ಹೆಂಡತಿಯ........

**ಬೃಹನ್ನಳೆ** ( ಬಡಿದೆಬ್ಬಿಸಿದವನಂತೆ ಎದ್ದು ನಿಂತು, ಉದ್ವೇಗದಿಂದ )—
ಬೇಗನುಡಿ ಪಾಂಚಾಲಿ !
ಧರ್ಮಜನ ಕಂಡಿಹೆಯ ?

**ಸೈರಂಧ್ರಿ** (ಸಮಾಧಾನದಿಂದ )— ಕಂಡಿಹೆನು.

**ಬೃಹನ್ನಳೆ** ( ಆತುರನಾಗಿ )— ಕೀಚಕನ
ಕೊಲ್ಲೆಂದು ಹೇಳಿಹನೆ ಯಮಸೂನು ? ಬೇಗ ನುಡಿ;
ಬೇಗ ನುಡಿ ಪಾಂಚಾಲಿ ! ಧರ್ಮನಾಣತಿಯೇನು ?
ಹಿರಿಯಣ್ಣನಾಜ್ಞೆಯಲಿ ವಿಾಸಲಿರುವದು ನೋಡು
ನನ್ನ ಸಾಹಸ ಬಲವು.

**ಸೈರಂಧ್ರಿ** ( ತನ್ನಲ್ಲಿ )— ಭರವಸೆಯ ನೌಕೆಯೇ !
ಹೊಯ್ದಾಡಿ ಕೆಡಬೇಡ. ಕಿಡಗೇಡಿ ದೈವವೇ

ನಂಬಿಗೆಯ ಸುಡಬೇಡ. ( ಹೊರಗೆ ) ಎನ್ನೆರೆಯ! ಬನ್ನ ಬೇ-
ದಿಯುಗುಂಟ ನಡೆವಾಗ ಹಿರಿಯವನ ಕಂಡೆನ್ನ
ಮನದಿರವನರುಹಿದೆನು.

ಬೃಹನ್ನಳೆ ( ತೀರ ಆತುರನಾಗಿ ) ಅಣ್ಣಯ್ಯನುತ್ತರವ
ಬೇಗರುಹು ಫಾಂಚಾಲಿ !

ಸೈರಂಧ್ರಿ ( ಸಾವಧಾನದಿಂದ )— ಎನ್ನೆರೆಯ ! ಎನ್ನ ಮಾ
ನದ ಬಲವೆ ! ಅಜ್ಞಾತವಾಸದಲಿ ಶೌರ್ಯಕವ-
ಸರವಿಲ್ಲ, ನಿಸ್ಸಹಾಯಕರಾಗಿ ಬಾಳುವರು
ನಿನ್ನವರು; ಕೀಚಕನು ಕಾಡಿದೊಡೆ ಕಾಯುವನು
ಪರಮಾತ್ಮನೆಂದೇನೋ ಹೇಳಿದನು. ನೀಡಿನಲಿ
ಸೊಗವಿಲ್ಲ; ಕ್ಷಮೆಯಲ್ಲಿ ದೇವನಿಹನೆಂದುಸುರಿ
ಜಾರಿದನು ಧರ್ಮಜನು. ಬನ್ನವರುಹಿದ ಮೇಲೆ
ಬೆನ್ನ ತಿರುವಿದನವನು; ಅಕಟಕಟ ! ಹೆಣ್ಣ ಬಾ
ಳಿನ ಗೋಳನರಿಯಲಿಲ್ಲವು ನೋಡು ನಿನ್ನಣ್ಣ
ನೆಂಬವನು. ನೀನಾರೆ ದಯೆದೋರು ಎನ್ನೊಡೆಯ !
ನಿನ್ನ ನೆರವನೆ ನಂಬಿ ನಿಂತಿಹಳು ಪಾಂಚಾಲಿ
ನೀನೊಬ್ಬ ಕೈಬಿಡಲು ಬದುಕಲಾರಳು ದೇವ
ನೀನೆನ್ನ ಬಲವಾಗು........

ಬೃಹನ್ನಳೆ ( ಮಾತನಾಡಗೊಡದೆ, ವಿಲಕ್ಷಣ ಸಂಕಟದಿಂದ )—
ಪಾಂಚಾಲಿ ! ಪಾಂಚಾಲಿ !
ಅಣ್ಣನಾಣತಿಯುಸುರಿ ನೀನೆನ್ನ ಕೊಂದೆಯಲೆ,
ನಿನ್ನುಸಿರ ಝಳದಿಂದ ಸಾಹಸವು ಕಮರಿತ್ತೆಲೆ,
ಹಿರಿಯಣ್ಣನಾಣತಿಯ ಮೀರಲಾರೆನು ದೇವಿ !
ಭಾಗ್ಯಹೀನಳು ನೀನು ! ಭಾಗ್ಯಹೀನಳು ನೀನು !
( ತಲೆಯ ಮೇಲೆ ಕೈಯಿಟ್ಟುಕೊಂಡು ಅಧೋಮುಖನಾಗಿ ಕುಳಿತುಕೊಳ್ಳುವನು. )

ಸೈರಂಧ್ರಿ (ತನ್ನಲ್ಲಿ)—ಸುಡುಗಾಡ ದೈವವೇ ! ಕಡೆಗೊಮ್ಮೆ ನಿನ್ನ ಬಲ

ತೋರಿದೆಯ ! ಕಂಗೆಟ್ಟು ಕೆಡಬೇಡ ತಾಳು ತಾ
ಳಿಲೆ ಮನವೆ ! ಆಸೆ ನೀಗುವ ಕಾಲ ಬಂದಿಲ್ಲ,
ಬೆದರದಿರು. ( ಹೊರಗೆ ) ನೀನಿಂತು ನುಡಿಯುವೊಡೆ ಕೇಡೆಳಸಿ
ಬಂದಂತೆ ಎನ್ನೆರೆಯ. ಆಣತಿಯನೆಸಗುವೊಡೆ
ಬುದ್ಧಿ ಬಾಹಿರವಲ್ಲ; ಜಗದ ಜೀವನದಲ್ಲಿ
ಜೀವಿಸುವ ತತ್ವಗಳನೆಲ್ಲವನು ನುಂಗಿಲ್ಲ
ಆಣತಿಯು. ನೀತಿಗಳ ನೆಲೆಗಟ್ಟು, ರೀತಿಗಳ
ಸಮಕಟ್ಟು, ಮೇಣೆದೆಯ ಬಲಕಟ್ಟು ತಲೆವಾಗಿ
ನಿಂತಿಲ್ಲವಾಣತಿಗೆ. ಬುದ್ಧಿವಂತನು ನೀನು
ಬುದ್ಧಿಬಾಗಿಲ ತೆರೆದು ಆಣತಿಯನೀಕ್ಷಿಪುದು .( ಕರುಣನೋಟ )

ಬೃಹನ್ನಳೆ [ ತನ್ನಲ್ಲಿ ]—ನಿಂತಲ್ಲೆ ಬಿರಿದೊಮ್ಮೆ ನುಂಗಿಬಿಡು ಭೂದೇವಿ !
ಬಾಳಿನಲಿ ಸೊಗವಿಲ್ಲ. ಅಣ್ಣನಾಣತಿ ಮೀರಿ
ನಡೆಯುವೊಡೆ ನರಕವಿದೆ. ಮೀರದೊಡೆ ಮಾನಹಾ
ನಿಗೆ ಬೆಂದ ಮಾನಿನಿಯ ಶಾಪವಿದೆ. ಇರ್ಬಾಯ
ಖಡ್ಗವಿದು ಹಾಯ್ದತ್ತ ಹದನವಿದೆ. ಜಗದ ಕೇ
ಡುಗಳೆಲ್ಲ ಗುಡಿಗಟ್ಟಿ ಬಂದರೂ ಅಣ್ಣನಾ
ಜ್ಞೆಯನೊರಸಿ ಬಾಳಲಾರೆನು ನಾನು. ಶ್ರೀ ಕೃಷ್ಣ !
ಸೋದರಿಯ ಕಾಯಯ್ಯ ! ಧರ್ಮಜನ ಸತ್ವವನು
ಸಿದ್ಧಿಗೊಯ್ಯುವ ಕಾಲ ಬಂದಿಹುದು ನೋಡಯ್ಯ !
[ ಹೊರಗೆ ] ಪಾಂಚಾಲಿ ! ಅಣ್ಣನಾಜ್ಞೆಯ ನೆಮ್ಮಿ ನಿಂತಿರುವ
ನನಗಿಂದು ನಿನ್ನ ತತ್ವದ ಬೆಳಕು ಕತ್ತಲೆಯ
ನೀಯುವದು. ಹಿರಿಯಣ್ಣನಾಜ್ಞೆಯೇ ವೇದವಾ
ಕ್ಯವು ದೇವಿ ! ಪಾಲಿಪುದೆ ಸದ್ಧರ್ಮ.

ಸೈರಂಧ್ರಿ [ ಇನ್ನೂ ಸಮಾಧಾನದಿಂದ ]— ನಿನ್ನೆದೆಯ
ದಿವ್ಯದೇವಾಲಯವೆ ನಿನ್ನ ಧರ್ಮದ ನಿಲಯ
ವಲ್ಲವೇನೆನ್ನೊಡೆಯ ! ನೀನದರ ಬಾಗಿಲವ
ತೆರೆದೊಮ್ಮೆ ನೋಡುವುದು. ನಿನ್ನ ಧರ್ಮದ ಬವಣೆ
ನರ್ತಿಪುದು ಕಾಣುವದು. ಕತಕತನೆ ಕುದಿಯುತಿಹ

ಹೆಣ್ಣೊಂದು ತೋರುವದು. ಆಣತಿಯು ಪಾವನತೆ
ದೆಸೆಗೆಟ್ಟು ಹೋಯಿತೆಲೆ. ನಿನ್ನನೇ ನಂಬಿರುವ
ಹದಿಬದೆಯ ಗತಿಯೇನು ಎನ್ನರಿಯ!

ಬೃಹನ್ನಳೆ [ ದೃಢವಾಗಿ ]— ಪಾಂಚಾಲಿ!
ಹಿರಿಯನಾಣತಿ ಮೀರಿ ನಡೆಯಲಾರೆನು ದೇವಿ!
ಧರ್ಮಜನ ನುಡಿಗಳಲಿ ಧರ್ಮವನು ಕಂಡಿಹೆನು.
ಸಕಲ ಧರ್ಮವ ಮೀರಿ ನಿಂತಿಹುದು ಧರ್ಮನಾ
ಡಿದ ಉಸಿರು. ಅವನುಸಿರೆ ಪಾವನವು.

ಸೈರಂಧ್ರಿ ( ರೋಷದುಂಬಿದ ದನಿಯಲ್ಲಿ )— ಕೈಪಿಡಿದು
ಬಂದವಳ ಕಣ್ಣೆದುರ ಕೆಣಕಿದರು ಧರ್ಮವನು
ನಂಬಿದಿರಿ. ಹಿರಿಯಣ್ಣನಾಜ್ಞೆಯಲಿ ಸೊಗವಾಂತು
ಬಾಳಿದಿರಿ. ಹೇಡಿಧರ್ಮವ ನಂಬಿ ಹೇಡಿಗಳು
ನೀವಾಗಿ ಹೆಂಡತಿಯ ಮಾರಿದಿರಿ. ಕೀಚಕನ
ಕಾಮದುರಿ ಮಡದಿಯನು ಕೊಂದರೂ ಧರ್ಮವನೆ
ಹೇಳುವಿರಿ. ಅಳತೆಗೆಟ್ಟಿತು ಧರ್ಮ. ಬಂದ ಹೆ
ಣ್ಣನು ಕೊಂದು ಪಾತಕವ ಮೆಚ್ಚುತಿಹ ಪಾಪಿಗಳ
ಸದ್ಧರ್ಮ.

ಬೃಹನ್ನಳೆ ( ವಿಶ್ವಾಸದಿಂದ )— ಕೆಡಕಾಡಿ ಕೆಡಬೇಡ ಪಾಂಚಾಲಿ!
ಧರ್ಮಜನ ನೆರೆ ನಂಬು. ಕಾಯುವನು ಪರಮಾತ್ಮ!

ಸೈರಂಧ್ರಿ ( ವ್ಯಂಗ್ಯವಾಗಿ )—
ಆಗಸದಿ ಗುಡುಗಾಡಿ ಆರ್ಭಟೆಯ ತೋರಿದರು
ಹನಿಯೊಡೆಯಲಿಲ್ಲಕಟ! ಗಂಡೆದೆಯ ಗಂಡುಸೇ!
ನಂಬು ನಂಬಲೆ ನಂಬು ನಂಬೆನ್ನ ಪಾಂಚಾಲಿ
ನಂಬೆಂದು ಹೇಳಿರುವ ನುಡಿನಂಬಿ ನಿಂತಿರುವ
ಹೆಣ್ಣೊಂದ ಕೊಂದೆಯೋ! ಹಿರಿಯಣ್ಣನಾಣತಿಯ
ಗರಹೊಡೆದು ಕೆಟ್ಟೆಯೋ! ಮೂರು ಲೋಕದ ಗಂಡ!
ಮನೆಯವಳ ಗೆಲ್ಲದಲೆ ಬಾಳುತಿಹ ದೋರ್ದಂಡ.
ನಿನಗೇಕೆ ಆ ಬಿರುದು?

**ಬೃಹನ್ನಳೆ** ( ಉಪಾಯಗಾಣದ ಸ್ವರದಲ್ಲಿ )— ಸವರಿಬಿಡು ಬಿರುದುಗಳ
ಪಾಂಚಾಲಿ ! ಹೇಡಿಗಳು ಪಾಂಡವರು ಷಂಢಗಂ
ಡಸರವರು.

**ಸೈರಂಧ್ರಿ**— ಕಲಿಪಾರ್ಥನೆಂಬವನು ಲಜ್ಜೆಗೆ
ಟ್ಟೆಹನಿಂದು. ಬಾಳುಬಾಳಿಲೆ ಕಲಿಯೆ ! ಹೊಕ್ಕ ಹೆ
ಣ್ಣನು ಸೀಳಿ ಸೊಗವಾಂತು ನೀ ಬಾಳು, ಹೇಡಿ ಗಂ
ಡರ ನಂಬಿ ನಿಂತವಳು ನಾನಲ್ತೆ ! ಪರಮಾತ್ಮ !
ನೀನಿನ್ನು ಕೈವಾರಿ! ನೀನೆನ್ನ ಬಲವಾಗು ! ( ಹೋಗಹೋಗುತ್ತ )
ಕಲಿಭೀಮನೊಬ್ಬನನು ಕಾಣುವೆನು ಕುಲದೇವಿ !
ನನ್ನ ಸಾಹಸದಾಶೆ ಬಲ್ಲವನ ಬಲದಿಂದ
ಮೇಲೇರಿ ಬರಲಮ್ಮ ! ನಿನ್ನ ತೇಜದ ಬೆಳಕು
ದಾರಿ ತೋರಲಿ ತಾಯಿ ! ಹದಿಬದೆಯರೆಲ್ಲರನು
ಯುಗಯುಗದಿ ಕಾಯ್ದಿರುವ ವರದಹಸ್ತಳು ನೀನು
ಹದಿಬದೆಯ ಕಾಯಮ್ಮ ! ಕರುಣವನು ತೋರಮ್ಮ !

( ಹತಾಶನಾಗಿ ಕುಳಿತಿರುವ ಬೃಹನ್ನಳೆಯನ್ನು ಮತ್ತೊಮ್ಮೆ ನೋಡಿ ಸರ್ರನೆ ಹೋಗುವಳು )

## ದೃಶ್ಯ ೫

( ಮರುದಿನ ಮುಂಜಾವಿನಲ್ಲಿ ಕೀಚಕನ ಮಲ್ಲ-ಸೇವಕರು ಮಾತನಾಡುತ್ತ ಬರುತ್ತಾರೆ. )

ಸೇವಕ ೧— ಕೇಡುಕೇಡೆಲೆ ಕೇಡು! ನಮ್ಮೊಡೆಯನಾಣತಿಯ
ಬಗೆ ಕೇಡು! ಮಲ್ಲಸಾಲೆಯಲಿಂದು ಬೆಳ್ಳಿಮಂ
ಚವನಿಟ್ಟು ಸಿಂಗರಿಸಬೇಕಂತೆ! ಸಿಂಗರದ
ಪರಿಯೆನಿತು ಚಿತ್ರವಾಗಿದೆ ಗೆಳೆಯ! ಗಂಡು ಶ
ಕ್ತಿಯ ತುಂಬಿ ಗಂಡೆದೆಗೆ ಕಳೆಯೆರೆವ ಗಂಡಗರು
ಡಿಯ ಮನೆಗೆ ಈ ಪರಿಯ ಸಿಂಗರವೆ? ಆಜ್ಞೆಗಳ
ನೆಸಗಿಹೆನು, ಹೇಳಿದುದು ಕೇಳಿಹೆನು, ನಮ್ಮಕೀ
ಚಕದೊರೆಯ ಪದಗಳಲಿ ಮಣಿದಿಹೆನು; ಆದರೀ
ಬಗೆಯ ಮಾತುಗಳನಾನೆಂದೆಂದು ಕೇಳಿ ಕೆ
ಟ್ಟಿರಲಿಲ್ಲ; ಕೇಡೇನು ಬಂದಿಹುದೊ ನಾನರಿಯೆ.

ಸೇವಕ ೨— ನಿನಗೇಕೆ ಸೋದರಾ, ಆಳ್ದನಾಣತಿಯಲ್ಲಿ
ಕುಂದಿಟ್ಟು ನುಡಿಯುವುದು? ಹೇಳಿರುವ ಕಜ್ಜಗಳ
ನುಡಿ ತಪ್ಪದಂತೆಸಗಿ ಧನ್ಯತಮರಾಗುವದೆ
ಸೇವಕರ ಕರ್ತವ್ಯ,

ಸೇವಕ ೧— ಸೇವಕನ ಬಾಳಿನಲಿ
ಜೀವನವ ತೇಲಿಸಿಹೆ: ಕರ್ತವ್ಯವೆಸಗಿಹೆನು.
ತನ್ನೊಡಲ ಮಾರಿದರು, ತನುತೆತ್ತು ನಿಂತರೂ
ಸೇವಕನು ಮಾನವನು; ದೊರೆಯ ಸಂಕಟದಲ್ಲಿ
ಸೇವಕರ ಸಂಕಟವು. ಇಂದೇಕೆ ನಾನರಿಯೆ
ನನ್ನಂತರಂಗದಲಿ ಕಾಡುದನಿ ಮೂಡುತಿದೆ.
ನಮ್ಮ ದೊರೆ ಕೀಚಕಗೆ ಕೇಡಡರಿ ಬಂದಂತೆ
ಭಾಸವಾಗುತಲಿಹುದು.

**ಸೇವಕ ೨**— ಬಲ್ಲಿದನು ನಮ್ಮೊಡೆಯ
ನಿನಗವನ ಚಿಂತೆಯೇ ? ಪಾಳ್ಪ ಕಜ್ಜವನಿಂದು
ಮನಮುಟ್ಟಿ ಮಾಡೋಣ. ಅವನ ಪಾಪಗಳೇನೊ ?
ಪುಣ್ಯ ಕೆಲಸಗಳೇನೊ ? ನಾವೇಕೆ ಕೆದರುವದು ?
ಕರ್ತವ್ಯ ಪಥದಲ್ಲಿ ಸೇವಕರ ಸಗ್ಗವಿದೆ.

**ಸೇವಕ ೧**— ನರಕಕೊಯ್ಯುವ ದಾರಿ ನಿಚ್ಚಳದಿ ತೋರುತಿದೆ.
ನಮ್ಮ ಕೀಚಕ ದೊರೆಯ ಬಾಳನರಿತವ ನಾನು.
ಯಾವ ಹೆಣ್ಣಿನ ಕೇಡೊ ನಾನರಿಯೆ.

**ಸೇವಕ ೩**—[ ಒಮ್ಮೆಲೇ ಬಂದು ]— ಮಲ್ಲರಿರ !
ಹರಟುತ್ತ ಹಗಲನ್ನೆ ಕಳೆವಂತೆ ಕಾಣುತಿದೆ.
ದೊರೆಯೆನ್ನ ಕರೆಕಳಿಸಿ ಮತ್ತೊಮ್ಮೆ ಹೇಳಿದನು.
ನಮ್ಮ ಕಜ್ಜಗಳೆಲ್ಲ ಗೋಪ್ಯವಾಗಿರಲೆಂದು
ಕಿವಿಯಲುಸುರಿದನವನು. ನಾಲಗೆಯ ಹರಿಬಿಡಲು
ತಲೆದಂಡ ನಮಗೆಂದು ಶಾಸನವನಿತ್ತಿಹನು.
ಸಾಗೋಣ ಮಲ್ಲರಿರ ! ಮಲ್ಲಸಾಲೆಯ ಮೊಗದ
ಬಗೆ ತಪ್ಪುವಂತೆಸಗಿ ಧನ್ಯತಮರಾಗೋಣ [ ವ್ಯಂಗ್ಯವಾಗಿ ]
ಮೂಲೋಕ ಜಟ್ಟಿಗಳು ! ಸಾಮಾನ್ಯರಾವಲ್ಲ !

[ ಇಬ್ಬರ ಹೆಗಲ ಮೇಲೆ ಕೈಹಾಕಿಕೊಂಡು ಹೋಗುವನು. ]

## ದೃಶ್ಯ ೬

[ ಬಾಣಸಿನ ಮನೆಯ ಒಂದು ಕೋಣೆಯಲ್ಲಿ ಬಲ್ಲವನು ಊಟವಾದನಂತರದ ವಿಶ್ರಾಂತಿಯಲ್ಲಿದ್ದಾನೆ. ]

ಸೈರಂಧ್ರಿ [ ಒಮ್ಮೆಲೆ ಪ್ರವೇಶಿಸಿ ]—

ಎನ್ನೊಡೆಯ ! ಎನ್ನೊಡೆಯ ! ಕುರುಕುಲಾಗ್ರಣಿಯಿಂದು
ಸುಲಿದ ಸೀರೆಯ ಬವಣೆ ಮತ್ತಿಂದು ಬಂದಿಹುದು
ನೀನೆನ್ನ ಕಾಯುವದು ! ನೀನೆನ್ನ ಕಾಯುವದು !

[ ಪಾದಗಳ ಮೇಲೆ ಬೀಳುವಳು. ]

ಬಲ್ಲವ ( ಆಶ್ಚರ್ಯಚಕಿತನಾಗಿ ಸೈರಂಧ್ರಿಯನ್ನು ಎಬ್ಬಿಸಿ ಬಾಗಿಲವನ್ನು ಭದ್ರಪಡಿಸಿ ಬಂದು )

ಕೂಗದಿರು ದ್ರೌಪದೀ ! ಬಾಣಸಿನ ಮನೆಯಲ್ಲಿ
ಅನವರತ ಸಂತೆಯಿದೆ. ಸುಡಿದತ್ತ ಕಿವಿಗಳಿವೆ.
ನಿನ್ನ ಕಂಗಳ ನೋಟವೆನ್ನೆದೆಯನಿರಿಯುವದು
ದ್ರೌಪದೀ ! ಬಂದ ಬವಣೆಯದೇನು ಮೆಲುದನಿಯ
ಲೊರೆಯೊಮ್ಮೆ.

ಸೈರಂಧ್ರಿ ( ಅಳುತ್ತ )— ಮೃತ್ಯುವಿನ ಮುಖದಲ್ಲಿ ಬಿದ್ದಿಹಳು
ನಿನ್ನವಳು. ನಾಯಿ ಕೀಚಕನೆನ್ನ ಸೂರೆಗೊಂ
ಡನೊ ನಲ್ಲ ! ಮಾನಹಾನಿಯ ಮಾಡಿ ಕಾಳು ಮಾ
ಮಾಡಿದನಕಟ ! ಗರುಡನೆರಗುವ ತೆರದಿ ಕೇಶಗಳಿ
ಗೆರಗಿದನು. ಭಂಡಮಾತುಗಳಿಂದ ಕಿವಿದೆರೆಯ
ಚುಚ್ಚಿದನು. ತೊತ್ತು ನೀ ಬಾರೆಂದು ಸಜ್ಜೆವನೆ
ಯನು ತೋರಿ ವಿಷದುಸಿರನೂದಿದನು. ತಾಳಲಾ
ರೆನು ದೊರೆಯೆ ! ಮಾನಹಾನಿಯ ಬೇಗೆ ನುಂಗುವದು
ಮಾನಿನಿಯ. ನೀನವಳ ಕಾಯುವದು.

ಬಲ್ಲವ [ ರೋಷದುಂಬಿ ನಿರಾಶೆಯಿಂದ ]— ಸುಮ್ಮನಿರು
ದ್ರೌಪದೀ ! ನಿನ್ನ ಬವಣೆಯ ಕತೆಯನನ್ನೆದುರು
ತೋಡದಿರು. ಹಿಂದೆನಿತೋ ಕೇಳಿಹೆನು. ಕೋಪಾಗ್ನಿ

ಯಲಿ ಬೆಂದು ಕೈಲಾಗದವನಂತೆ ಸುಮ್ಮನೇ
ಕುಳಿತಿಹೆನು. ರೋಷದುರಿಯಾರಿಸುತ ಧರ್ಮಜಗೆ
ಬಾಗಿಹೆನು. ಹಿಂದಿನನುಭವ ಸಾಕು. ನುಡಿಗಳಲಿ
ಕಿಡಿದುಂಬಿ ನೀನೆನ್ನ ಕೆಣಕದಿರು. ಧರ್ಮಜನ
ಮೊರೆಹೊಕ್ಕು ಅರ್ಜುನನ ಕೈಯಿಂದ ಕೀಚಕನ
ಸೆದೆಬಡಿಸಿ ನಿನ್ನೆದೆಯ ತಣಿಸುವದು. ನಾನಂತು
ನಿರ್ಬಲನು. ( ಕೈಗಳನ್ನು ತಿಕ್ಕುವನು. )

ಸೈರಂಧ್ರಿ — ಎನ್ನೊಡೆಯ ! ಎನ್ನೊಡೆಯ ! ಧರ್ಮವಂ-
ತನು ಧರ್ಮ, ಧರ್ಮನನೆ ನಂಬಿದನು; ನಿಷ್ಠೆವಂ-
ತನು ತಮ್ಮ ಧರ್ಮಜಗೆ ಬಾಗಿದನು. ಎನ್ನೊಡೆಯ
ಹೆಂಡತಿಯು ಹರಿಬದಲಿ ಮೈಯುಳಿಸಿಕೊಂಡಿಹರು
ಗಂಡರಿಬ್ಬರು ನೋಡು ! ಅಕಟಕಟ ! ಸಿಕ್ಕ ಧರ್ಮವ
ನೆಮ್ಮಿ, ಹೊಕ್ಕ ಹೆಣ್ಣನು ಚಿಮ್ಮಿ, ಗತಿಗೇಡು
ಮಾಡಿದರು ಗಂಡರೆಂಬುವರಿವರು. ನೀನೊಬ
ನಿಂತೊರೆಯೆ ನನಗಾರ ಗತಿ ದೇವ !

( ಕಣ್ಣೀರು ಸುರಿಸುತ್ತ ಎದೆಗೆ ಮೊಗಹಚ್ಚುವಳು. )

ಬಲ್ಲವ ( ಕಳವಳದಿಂದ )— ದ್ರೌಪದೀ !
ನಿನ್ನ ಕಣ್ಣಿನ ಹಸಿಗೆ ಕರಗಲಿಲ್ಲವೆ ಧರ್ಮ ?
ನಿನ್ನ ಗತಿ ನಿನಗಿರಲಿ ಅರೆವೆಣ್ಣು ನಾನೆಂದು
ಬೀಳುಗೊಟ್ಟನೆ ನಿನ್ನ ಗಾಂಡೀವ ಹೊತ್ತವನು.
ಹೇಸಿ ಧರ್ಮವ ನಂಬಿ ಹಸಗೆಟ್ಟ ಧರ್ಮಜನು
ಹಸನಾಗಿ ನಿಂತಿಹನು. ಬೆಂದೊಡಲ ಲೆಕ್ಕಿಸನು.
ಹಿರಿಯಣ್ಣನಿಟ್ಟಿರುವ ಹೆಜ್ಜೆಗಳ ತುಳಿತುಳಿದು
ಹೆಜ್ಜೆ ಕುಳಿತಿದೆ ದೇವಿ ! ಚಂಡ ಭುಜಬಲವೆಲ್ಲ
ಮಣ್ಣುಪಾಲಾಗಿಹುದು. ( ಹಲ್ಲುಕಡಿದಂತೆ ) ದ್ರೌಪದೀ ! ದ್ರೌಪದೀ !
ದುರ್ಬಲನು ಭೀಮನಿವ ಧರ್ಮಜನ ಮೊರೆಹೋಗು.

ಸೈರಂಧ್ರಿ ( ಒಮ್ಮೆಲೆ )—ಅಂತಕನ ಮೊರೆಹೊಕ್ಕು ನಿಶ್ಚಿಂತಳಾಗುವೆನು
ಸಾಯುಗೊಡು ಕಲಿಭೀಮ! ಬೇಡಾದ ಜೀವನವು
ಬದುಕುವದು ಸರಿಯಲ್ಲ. ಕಂಡ ಗಂಡಸರೆಲ್ಲ
ಮಾನವನು ತೂರಿದರು ಭಂಡ ಹೆಣ್ಣಿನ ತೆರದಿ.
ಬಾಳಲಾರೆನು ನಲ್ಲ! "ಹೆಂಡತಿಯು ಕೆಣಕಿದರೆ
ವೈರಿಯನು ಕಡಿಖಂಡ ಮಾಡುವರು" ಜಗದ ಗಂ
ಡರದೆಲ್ಲ. ನಿಶ್ಯಕ್ತ ದುರ್ಬಲರು ನಿಸ್ಸಹಾ
ಯಕರೆಲ್ಲ ಪುಂಡನನು ಕೆಣಕುವರು. ಹರಣ ಹಾ
ರುವವರೆಗೆ—ಎನ್ನೊಡೆಯ!—ಹೆಂಡತಿಯ ಕಾಯುವರು.
ಗಂಡರೈವರು ನೀವು—ಜಗದ ಪುಂಡರು ನೀವು—
ಚಂಡಭುಜಬಲರೆಂದು, ಕಾಳಭೈರವರೆಂದು
ಗಂಡುಗರ್ವವ ತಾಳಿ ನಿಂತಿರುವ ನೀವುಗಳು,
ಮೂಲೋಕ ಪತಿಯೊಬ್ಬ, ಅಂತಕನ ಕೋಣವನು
ಸೊಗಕೆಳೆದು ತರುತಿರುವ ಗಂಡುಗಲಿ ನೀನೊಬ್ಬ
ಕೈಹಿಡಿದು ನಿಂತಿರುವ ಹೆಂಡತಿಯ ನೋಡದೆಯೆ
ಷಂಢಗಂಡಸರಂತೆ ಗತಿಗೆಟ್ಟು ಗಳಪುವಿರಿ.
ಕಾಲಮಹಿಮೆಯ ಕೇಡು, ನೀವೇನು ಮಾಡುವಿರಿ.
( ಮೋರೆಯನ್ನು ಕೈಗಳಿಂದ ಮುಚ್ಚಿಕೊಂಡು ಬಿಕ್ಕಿಬಿಕ್ಕಿ ಅಳತೊಡಗುವಳು. )
ಬಲ್ಲವ ( ತನ್ನಲ್ಲಿ )—ಇವಳ ಸಂಕಟವೆನ್ನ ಕರುಳುಗಳ ಕಿವಿಚುತಿದೆ.
ಧರ್ಮಜನ ಮೀರೆಂದು ದಿವ್ಯದನಿಯೊಂದೆನ್ನ
ಬೆಂದೆದೆಯ ಗರ್ಭದಲಿ ನುಡಿಯುತಿದೆ, ಮಾನಿನಿಯ
ಮಾನವನು ಮೆಟ್ಟುತಿಹ ಧರ್ಮವನು ಮೆಚ್ಚಿ ಕೆ
ಟ್ಟನು ಧರ್ಮ. ಹುಂಬ ಭೀಮನು ನಾನು ಮಾನಿನಿಯ
ಕಾಯುವೆನು. ಹೆಣ್ಣುಧರ್ಮವನುಳಿಸಿ ಹೆಂಡತಿಯ
ಕಾಯುವದು ಹುಂಬಭೀಮನ ಧರ್ಮ. ಮಿಕ್ಕ ಧ
ರ್ಮಗಳೆಲ್ಲ ಹೇಡಿಗಳ ಜೊತೆಗಿರಲಿ, ( ಹೊರಗೆ ) ನುಡಿಯದಿರು
ದ್ರೌಪದೀ! ನಿನ್ನ ನುಡಿಗಳ ಧಾರೆ ಎನ್ನೆದೆಯ

ಸೀಳುವದು. ಕೀಚಕನ ತಲೆಗಡಿದು ಮರುಳುಗಳಿ
ಗೆಡೆಯಿಡಲು ಮನವೆದ್ದು ಕುಣಿಯುವದು. ಆ ಕ್ಷಣವೆ
ಧರ್ಮನಾಣತಿ ಬಂದು ಥುತ್ತೆಂದು ನಿಲ್ಲುವದು.
ಬಾಯ್ದೆರೆದು ನಿಂತಿರುವ ಸಿಂಹಗಳು ಈ ಕಡೆಗೆ
ಹಸಿವಾಂತು ಬಂದಿರುವ ಹೆಬ್ಬುಲಿಗಳಾ ಕಡೆಗೆ.
ಎತ್ತ ಹೋದರು ಸಾವು ನೃತ್ಯವಾಡುತಲಿಹುದು........

ಸೈರಂಧ್ರಿ ( ತಡೆದು )—ಕ್ಷಮಿಸುವದು ಬಲಭೀಮ! ನೀನೆನ್ನ ಬವಣೆಯಲಿ
ಬೆಂದು ಬಾಳುವದೇಕೆ ? ಪಾಂಡವರ ಕೈವಿಡಿದು
ಕೇಡುಗಳ ತಂದೊಡ್ಡಿ ಸಾವನೆನೆಯುವ ಹಾಗೆ
ಮಾಡುತಿಹ ಚಾಂಡಾಳ ಕನ್ನಿಕೆಯು, ಪಾತಕಳು
ನಾನಿಹೆನು. ಸಾವಿಗೌತಣವಿತ್ತು ನೀನೆನ್ನ
ಕಳುಹಿಬಿಡು. ಸೆಳೆದು ಪೊಡೆ ಕೋಲಿಂದಲೀ ಶಿರವ.
ನಿನ್ನ ಕೈಯಿಂದೆನ್ನ ಸಾವೆನಗೆ ಸಮನಿಸಲಿ. ( ತಲೆಯೊಡ್ಡಿ ನಿಲ್ಲುವಳು. )

ಬಲ್ಲವ( ಅವಡುಗಚ್ಚಿ )—ನಿನ್ನ ತಲೆಯನ್ನೇಕೆ, ಕೀಚಕನ ತಲೆಗಡಿದು
ಕರುಳುಗಳ ಹೊರೆದೆಗೆದು ರಕ್ತಸ್ನಾನವ ಮಾಡಿ
ನಿನ್ನೊಡಲ ತಣಿಸುವೆನು. ದಾಟಿದೆನು ದ್ರೌಪದೀ !
ಅಣ್ಣನೆಳೆದಿಹ ಗೆರೆಯ ದಾಟಿದೆನು ನಾನಿಂದು.
ಹಿರಿಯನಾಜ್ಞೆಯನನುಜ ಭಂಗಿಸಿದ ದೋಷದುರಿ
ಯೆನ್ನೊಡಲ ದಹಿಸಿದರು ತಾಳುವೆನು, ಧರ್ಮಮೂ
ರ್ತಿಗಳೆಲ್ಲ ಕುಂದಿಟ್ಟು ಜರೆದರೂ, ಹೆಣ್ಣ ಹರಿ
ಬವ ನಂಬಿ, ಹಿರಿಯನಾಜ್ಞೆಯ ಮೀರಿ ಕೆಟ್ಟಿರುವ
ಕೇಡಾಳಿ ಕಲಿಭೀಮನೆಂದರೂ ಸೈರಿಸುವೆ.
ಹೇಳೆಲ್ಲಿ ಕೀಚಕನು ? ತುಂಡರಿಸಿ ಚೆಲ್ಲುವೆನು.
( ಹೊರಡಲನುವಾಗುವನು. )

ಸೈರಂಧ್ರಿ ( ಆನಂದದಿಂದ )—
ಜಯವಿರಲಿ ಬಲಭೀಮ ! ಹೆಣ್ಣ ಮಾನವ ಕಾಯ್ವ
ಪುಣ್ಯವಂತನು ನೀನು ! ನೀನೆನ್ನ ಪರಮಾತ್ಮ !

**ಬಲ್ಲವ**—ಬಣ್ಣನೆಯ ಮಾತಿರಲಿ. ಖುಲ್ಲಕೀಚಕನೆಲ್ಲಿ
ಕುರುಹಿಟ್ಟು ಹೇಳೆನಗೆ. ನಿದ್ರಿಸುವ ಮುನ್ನವೇ
ಯಮಪುರಿಗೆ ಕಳಿಸುವೆನು. ಹೇಳೆಲ್ಲಿ ಕಾಮುಕನು?

**ಸೈರಂಧ್ರಿ**—ಸಾವಧಾನವು ದೇವ! ಯೋಜನೆಯ ಮಾತೊಂದ
ಹೇಳಬೇಕೆನ್ನುವೆನು ಕಾಲಭೈರವ ಕೆರಳ
ಲುಳಿಯುವನೆ ಕೀಚಕನು.

( ಕಿವಿಯಲ್ಲಿ ತನ್ನ ಯೋಜನೆಯನ್ನು ಹೇಳುವಳು. )

**ಬಲ್ಲವ** ( ನಗುತ್ತ— )— ಶಕ್ತಿವಂತರ ಮಡದಿ
ಯುಕ್ತಿವಂತಳು ನೀನು. ಎಲೆ ನೀಚ ಕಾಮುಕಾ!
ಬಾರದಿರು! ಬಾರದಿರು ಮಲ್ಲಸಾಲೆಯ ನಂಬಿ
ನಿಲ್ಲದಿರು ಕೀಚಕಾ! ಮಲ್ಲಸಾಲೆಯಲಿಂದು
ಯಮನಾಟವಾಗುವದು. ದುಷ್ಟ ಕಾಮುಕ ನೀನು.
ಹೆಣ್ಣುಸಿರ ತಂಗಾಳಿ ಘಾತಮಾಡಿತೊ ನಿನ್ನ.
ಕಾಮನೆಗೆ ಸೆರೆಯಾಗಿ ಹೆಣ್ಣ ವಚನವ ನಂಬಿ
ಕಂಗೆಟ್ಟ ಕಾಮುಕಾ! ಇಂದಿನಿರುಳಿನ ದಿನವು
ನಿನ್ನ ಮೋಕ್ಷದ ದಿನವು. ನಡೆಯಿನ್ನು ದ್ರೌಪದಿ!
ನಿನ್ನ ಕೆಣಕಿದ ನರನ ನರಹರಿದು ಬೇಳೇಳು.
ನೀನಂತು ಮಾಮಾರಿ! ಕೀಚಕನ ಹೆಮ್ಮಾರಿ!

**ಸೈರಂಧ್ರಿ** ( ಆನಂದದಿಂದ ಪುಳಕಿತಳಾಗಿ )—
ನಮಿಸುವೆನು ಕಲಿಭೀಮ! ಶತಕೋಟಿಸಲ ನಮಿಸಿ
ಪಾವನತೆ ಹೊಂದುವೆನು. ನೀನೆನ್ನ ಕೈವಾರಿ.
ನೀನೆನ್ನ ಪರಮಾತ್ಮ. ಪಾಂಡವರ ಕುಲದೇವಿ!
ಜಯವನೀಯೆಲೆ ತಾಯೆ! ಕಲಿಭೀಮನೆಂಬವನ
ಬೆಂಗಾವಲಾಗಮ್ಮ! ನಿನ್ನಣುಗ ಕಲಿಭೀಮ!
ನಿನ್ನೆದೆಯ ಮಗನಮ್ಮ! ಅವನರಿವು ನಿನಗಮ್ಮ!

( ಮುಗುಳು ನಗೆಯಿಂದ ಭೀಮನನ್ನು ನೋಡುತ್ತ ನಮಸ್ಕರಿಸಿ ಹೋಗುವಳು. )

## ದೃಶ್ಯ ೭

(ಮಂಚ್ಚಂಜೆಯ ಮುಂದೆ ಕೀಚಕನ ಮಲ್ಲಸೇವಕನು ಉದ್ವಿಗ್ನನಾಗಿ ಹಾಡುತ್ತ ಬರುವನು)

೧

ಕಾಲಕೇನು ಕೇಡು ಬಂತು
  ಮತ್ಸ್ಯಪುರದ ಬಂಟರಾ;
ಮಲ್ಲಸಾಲೆಗಾಯಿತಿಂದು
  ಸಜ್ಜೆವನೆಯ ಸಿಂಗರಾ.

೨

ಕೆಂಪು ಹುಡಿಯು ಬಳಿದು ಚೆಲ್ಲ
  ಲೊಡನೆ ನೆತ್ತರುಗುಳಿತು;
ಮಲ್ಲಸಾಲೆ ನೆತ್ತರುಳಿದ
  ಬಸಿರ ತೆರೆದು ತೋರಿತು.

೩

ಗಂಡರದಟನೊರಸುವಂತೆ
  ತೊಳೆದು ಬಣ್ಣ ಬಳಿದೆನು;
ಭಂಡರಾಟ ಹೆಚ್ಚುವಂತೆ
  ಕಾಮು ಪಟಗಳೆಳೆದೆನು.

೪

ಕಂಪನುಗುವ ಧೂಪ ಹಾಕಿ
  ಗಂಧಬತ್ತಿಯುರಿಸಿದೆ;
ಸೊಂಪನೆಲ್ಲ ಕೂಡಿಹಾಕಿ
  ಕಾಮುದುರಿಯ ಹರವಿದೆ.

೫

ಬಾಸಿನಲ್ಲಿ ತೇಲಿ ಬರುವ
ಬಿಳಿಯ ಮೋಡದಂತೆಯೆ;
ತೂಗುಬಿಟ್ಟ ಕಂಪಿನಲ್ಲಿ
ಬೆಳ್ಳಿ ಮಂಚವಲ್ಲಿಯೆ.

೬

ಮಲ್ಲಸಾಲೆಯಲ್ಲಿ ಸಿದಿಗೆ
ಶೋಭೆಯಾಂತು ನಿಂತಿತು;
ಬಲ್ಲಶಕ್ತಿ ಹೆಣವ ಹೊತ್ತು
ಗೋರಿದನು ಕರೆದಿತು.

೭

ಕೇಡು ಮಲ್ಲಸಾಲೆಯಲ್ಲಿ
ರೂಪದಳೆದು ನಿಂತಿತು;
ನೋಡು ನೋಡುವಂತೆ ಸಾಲೆ
ಬಣ್ಣಗೆಟ್ಟು ಹೋಯಿತು.

೮

ಗಂಡರೆದೆಯ ಕೆಚ್ಚನಾಂತ
ಗಂಡಗರುಡ ಮನೆಯಿದು;
ಮದನ ಮಂತ್ರಮುಗ್ಧಳಾದ
ಹೆಣ್ಣ ಬಳಕೆಗಾಯಿತು.

೯

ಮಲ್ಲಗೆಳೆಯ ! ಅಳಲು ಬೇಡ
ನಿನ್ನ ಗೋರಿ ತೆರವಿದೆ;
ಖುಲ್ಲ ಕಾಮನಾಟಕದುವೆ
ಬಾಯಿ ತೆರೆದು ನಿಂತಿದೆ.

(ಮೊದಲನೆಯ ಪದ್ಯವನ್ನು ಶಿಳ್ಳಿನಲ್ಲಿ ಹಾಡುತ್ತ ಸಾಗುತ್ತಿರುವಷ್ಟರಲ್ಲಿ ಹಿಂದಿನಿಂದ)

ಸುಧೇಷ್ಣೆ—ನಿಲ್ಲಲ್ಲಿ ಸೇವಕಾ !

ಸೇವಕ (ತಿರುಗಿ ಬಂದು)— ಕೂಗಿದಿರ ಮಾತಾಯಿ ?

ಸುಧೇಷ್ಣೆ—ನಿಮ್ಮೊಡೆಯನೆಲ್ಲಿಹನು ಬೇಗ ನುಡಿ ಸೇವಕಾ !
ನಾನವನನೀ ಕ್ಷಣದಿ ಕಾಣಬೇಕಾಗಿಹುದು.

ಸೇವಕ (ತನ್ನಲ್ಲಿ)— ನಿಜವನೊರೆವರು ಕೂಡ ನಿಜದ ನೆಲೆ ಸಿಗದಂತೆ
ನುಡಿಯುವುದೆ ನನ್ನ ತಲೆಕಾಯುವದು (ಹೊರಗೆ) ಮಾತಾಯಿ
ನಮ್ಮ ದೊರೆ ಮಂದಿರದಲಿರಬಹುದು; ನೋಡಿ ಬರ
ಲೇ ತಾಯಿ ?

ಸುಧೇಷ್ಣೆ— ಜೊತೆಯಾಗಿ ಮುಂದೆ ನಡೆ; ನಿಮ್ಮ ದೊರೆ
ಮಂದಿರದಲಿರಬಹುದೆ ಸೇವಕಾ ? ಚೆನ್ನಾಗಿ
ಬಲ್ಲೆಯಾ ?

ಸೇವಕ— ಮಂದಿರವನುಳಿದೆಲ್ಲಿ ಹೋಗುವನು
ತಾಯಮ್ಮ ! ಮನಕೆ ಬೇಸರವಾಗಲೊಮ್ಮೊಮ್ಮೆ
ಮಲ್ಲಸಾಲೆಯಲವನು ವಿಶ್ರಾಂತಿ ಹೊಂದುವನು.

ಸುಧೇಷ್ಣೆ— ಹೀಗೇನು ? ಕೇಳಿಲ್ಲಿ ಸೇವಕಾ ! ನೀನವನ
ಕರೆತರಲು ಮಲ್ಲಸಾಲೆಗೆ ಹೋಗು. ಬೇಗೋಡು
ಸೇವಕಾ ! ಓಡುತೋಡುತ ಹೋಗಿ ನೋಡಿ ಬಾ !
ನಾನವನ ಮಂದಿರಕೆ ಒರ್ವಳೇ ಹೋಗುವೆನು.
ಬೇಗೋಡು ನಿಲ್ಲದಿರು.

ಸೇವಕ— ಬಾಗುವೆನು ಮಾತಾಯಿ.

(ನಮಸ್ಕರಿಸಿ ಸೇವಕನು ಮಲ್ಲಸಾಲೆಯತ್ತ ಓಡುವನು. ಸುಧೇಷ್ಣೆಯು ಕೀಚಕನ ಮಂದಿರದತ್ತ ಭರದಿಂದ ಸಾಗುವಳು.)

## ದೃಶ್ಯ ೮

( ಸಿಂಗಾರವಾದ ಮಲ್ಲಸಾಲೆ, ಕೀಚಕನು ಚಂಚಲಚಿತ್ತನಾಗಿ ಎಡೆಯಾಡುತ್ತ-
ಲಿದ್ದಾನೆ. )

ಕೀಚಕ—ಇನ್ನರ್ಧ ಗಳಿಗೆಯಲಿ ಸೈರಂಧ್ರಿ ಬಂದೆನ್ನ
ಸಗ್ಗಸುಖಕೊಯ್ಯುವಳು. ಮೇರೆದಪ್ಪಿದ ಮುದವ
ನೀಯುವಳು ಸೈರಂಧ್ರಿ ! ಸಗ್ಗವೆಣ್ಣುಗಳಲ್ಲಿ
ರೂಪಸೀಮೆಯ ಕೊರೆದು ರಂಭೆಯರ ಮೇಳದಲಿ
ಮೈಮರೆತ ದೇವೇಂದ್ರ ! ಕೀಚಕನ ಸೊಗದಲ್ಲಿ
ಕೀಳ್ಮನವ ಮಾಡದಿರು; ಹೊಟ್ಟೆಯುರಿ ತೋರದಿರು.
ಸೌಂದರ್ಯದಧಿದೇವಿ ತನ್ನ ವಿಲಾಸವ ಸುರಿದು
ಕೀಚಕನಿಗಿತ್ತಿಹಳು. ಭಾಗ್ಯದುಂಬುವ ಕಾಲ
ಭೋಗಸವಿಯುವ ಕಾಲ, ಚಣವು ಮುಗಿಯುವ ಮುನ್ನ
ನನ್ನದಿದೆ ಬಾನ ಬಯಲಿನ ಗುಂಟ ನಡೆಯುತಿಹ
ಚಂದಿರನೆ ! ಕುಂಟುಬಿದ್ದಿಹ ನಡಿಗೆ ತರವಲ್ಲ
ವೀದಿನವು. ಓಡುತಿರು, ಓಡುತಿರು, ನಾಗಾಲಿ
ನೋಟದಿಂದೋಡುತಿರು ನೀನಿಂದು. ಚಣಮಿನ್ನು
ತಡೆಯುವದು ಕಾಮುಮುರಿ ಬಿದ್ದವಗೆ ಕಾಲವನು
ನೆನೆವಂತೆ. ಸೈರಂಧ್ರಿಯೇಕಿಂತು ತಡಮಾಡು
ತಿಹಳಕಟ ! ಬರುವಳೋ? ಬರುತಿಹಳೊ ? ಬಾರಳೋ?
ಎಂದೆನ್ನ ಮನ ಕೆಣಕಿ, ಮದನಾಂಬು ತಾಕಿರುವ
ನೊಂದೆದೆಯು ಕೇಳುತಿದೆ. ಕಂಗೆಟ್ಟ ಕಾಮುಕನ
ಕಣ್ಣು ತಪ್ಪಿಸಲೆಂದು, ಜಾರುವದು ಮಿಗಿಲೆಂದು
ಮೇಣಂದು ಹಂಚಿಕೆಯ ಹರವಿದಳೊ ? ಮೋಸವೆರ
ಚಿದಳೇನೊ ಸೈರಂಧ್ರಿ? ನಂಬುಗೆಯ ಕೊಲೆಮಾಡಿ
ಬದುಕುವಳೆ ರೂಪಸಿಯು ? ಅಲುಗಾಡಿ ಕೆಡಬೇಡ,

ಕಾತರಿಸದಿರು ಮನವೆ! ಸೈರಂಧ್ರಿ ಬರುತಿಹಳು.
ರೂಪವಿಹ ಹೆಣ್ಣುಗಳು ನಂಬುಗೆಯ ತವರುಗಳು.
ಮೇರೆದಪ್ಪಿದ ರೂಪವಾಂತವಳು ಸೈರಂಧ್ರಿ!
ಆ ದಿವ್ಯದೇಹದಲಿ ಮೋಸಕೆಡೆಯಿನಿತಿಲ್ಲ.
ಕಾತರಿಸಿ ಕೆಡುವವನು ಕಾಮದುರಿ ಬಿದ್ದವನು.

(ಸೈರಂಧ್ರಿಯು ಸೇವಕನೊಡನೆ ಪ್ರವೇಶಿಸುವಳು.)

ಬಂದಳದೊ! ಸೈರಂಧ್ರಿ ಬಂದಳದೋ! ಕಾಮಸಿರಿ
ದುಂಬಿರುವ ಕಾಮನಾಟದ ಗೊಂಬೆ ಧಾವಿಸುತ
ಬಂದಳಿದೋ! ಬಾ ಬೇಗ ಸೈರಂಧ್ರಿ! ಪ್ರಜ್ವಲಿಪ
ಕಾಮಾಗ್ನಿ ಜಾಜ್ವಲ್ಯವಾಗಿಹುದು ಮೇಣೆನ್ನ
ಹೃದಯವನು ಕಳಕಳಿಸಿ ಸುಡುತಿಹುದು. ನಿನ್ನ ಶೀ
ತಲಸ್ಪರ್ಶಚಂದನವ ತೊಡೆದೆನ್ನ ತಣಿಸೊಮ್ಮೆ
ಸೈರಂಧ್ರಿ. ನಿನ್ನ ಬರವನೆ ನಂಬಿ ಕಾಯುತ್ತ
ಕುಳಿತಿಹೆನು. ನಿನ್ನ ತಣಿವನು ನೀಡು.

ಸೈರಂಧ್ರಿ (ಮುಗುಳುನಗೆಗೂಡಿ)— ಕಂಗೆಟ್ಟು
ಕೆಡಬೇಡ ತಡೆ ವೀರ! ನಿಮಿಷದಲಿ ನಿನ್ನೊಡಲು
ತಣಿವಂತೆ ಮಾಡುವೆನು. ಶಾಶ್ವತವು ಆ ತಣಿವು.

ಕೀಚಕ (ಆನಂದದಿಂದ)—
ಭೋಗಪುರದಾಲಯದಿ ಸೊಗ ಮಾಸಲೆಂಬವರ
ತಲೆಗಡಿದು ಹಾಕುವೆನು. ಸಗ್ಗ ಸುಖವನು ಸೀಳಿ
ಕೀಚಕನು ನಿಂತಿಹನು. ಹದಿನಾಲ್ಕು ಲೋಕಗಳ
ಸೊಗ ಹೀರಿ ಬಂದಿಲ್ಲಿ, ಮಲ್ಲ ಮಂದಿರದಲ್ಲಿ
ಸ್ವಪಾಂತು ನಿಂತಿಹುದು. ಭಾಗ್ಯವಂತನ ಭೋಗ
ದಿನತುಂಬಿ ಬಂದಿಹುದು. ಮುದವು ಮುದವೋ ಮುದವು!
ಮುದವಿಲ್ಲಿ ಕುಣಿಯುತಿದೆ; ಮದವೇರಿಯಾಡುತಿದೆ.

(ಸೇವಕನಿಗೆ)

ಹೋಗಿನ್ನು ಸೇವಕಾ! ಮುಂದೇಕೆ ಬರುತಿರುವಿ?
ಬಾರಿತ್ತ ಸೈರಂಧ್ರಿ! ನಾಚುವದು ಸಾಕಿನ್ನು.

ಸೈರಂಧ್ರಿ (ಧೃಢತೆಯಿಂದ)—

ಸೇವಕನ ಕರದಲ್ಲಿ ತಳಿಗೆಯಿದೆ ಉಪಹಾರ
ತುಂಬಿರುವ ತಟ್ಟೆಯಿದೆ. ನಾನದನು ಹೊತ್ತೆಂದು
ಕೀಚಕನ ತೊತ್ತೆಂದು ಸಾರುವದು ಬೇಕಿಲ್ಲ.
ಕೀಚಕನ ಮಂದಿರಕೆ ತೊತ್ತೆಂದು ಬರಲಿಲ್ಲ;
ತಿಳಿಯುವದು ವೀರವರ! ಹೋಗಯ್ಯ! ಸೇವಕಾ
ತಂದಿರುವ ತಟ್ಟೆಯನು ಮಲ್ಲಸಾಲೆಯಲಿಟ್ಟು
ನನ್ನಾಜ್ಞೆಯಂತೆಸಗಿ ತೆರಳಯ್ಯ! ತಡ ಬೇಡ;
ಬಂದ ಕಜ್ಜವನೊಡನೆ........ಬೇಗದಲಿ........

(ಕಣ್ಣು ಸನ್ನೆಮಾಡುವಳು.)

ಕೀಚಕ (ಸಂತೋಷದ ಆವೇಗದಲ್ಲಿ)— ಉಪಹಾರ

ತಂದಿಹೆಯ ಸೈರಂಧ್ರಿ! ತನಿಸೊದೆಯುಸೀಯುವೆಯ
ಸೈರಂಧ್ರಿ! ನಿನ್ನಧರ ಫಲದಲ್ಲಿ, ತಟ್ಟೆದವೆ
ತಟಕಿಕ್ಕಿ ನೋರುತಿಹ ಸೊದೆಯಿರಲು, ಸೈರಂಧ್ರಿ
ನೀನೇತಕಿವುಗಳನು ತಂದಿರುವೆ? ಬುದ್ಧಿವಂ
ತಳು ನೀನು ಸೈರಂಧ್ರಿ! ಹೊತ್ತುಗಳೆಯುತಲಿನ್ನ
ಪ್ರಾಣವನೆ ಹಿಂಡುತಿಹೆ. ಕೀಚಕನ ಭೋಗದಲಿ
ಮುನ್ನುಡಿಯ ನೆರವೇಕೆ? ಹಾಳು ಹಣ್ಣುಗಳೇಕೆ!
ಸೇವಕಾ! ತಟ್ಟೆಯನ್ನೊಳಗಿಟ್ಟು ಬೇಗೋಡು.
ನಿಲ್ಲದಿರು. ಪ್ರಾಣಕಂಟಕನಾಗಿ ಬಂದಂತೆ
ತೋರುತಿದೆ ನೀನೊಬ್ಬ. ಬೇಗಿಟ್ಟು ಹೋಗಯ್ಯ!
ಚಣವೊಂದು ಯುಗವೆನಗೆ. ಕಾಮುಸಿರಿ ಸಂಪನ್ನೆ
ಉಪಹಾರ ತಂದಿಹೆಯ! ಕೀಚಕನಿಗುಪಹಾರ........

(ಸೈರಂಧ್ರಿಯ ಕಡೆಗೆ ಉನ್ಮತ್ತ ಹೆಜ್ಜೆಗಳನ್ನಿಡುತ್ತ ಸಾಗುತ್ತಿರುವಾಗ)

ಸೇವಕ ( ತಟ್ಟೆಂಯುನ್ನಿಟ್ಟು )—
ನೀನೆನ್ನ ಉಪಹಾರ! ನಿನಗೆಲ್ಲಿ ಉಪಹಾರ!
ಚಣವೊಂದು ಯುಗವೆನಗೆ. ಹಸಿವಾಂತು ನಿಂತಿಹೆನು.
ನಿನ್ನ ನೆತ್ತರಿನೆಡೆಗೆ ಮನವಾಂತು ಬಂದಿಹೆನು.
ಹೆಣ್ಣ ಕೆಣಕಿದ ನರನ ಕೆನ್ನೀರ ಕುಡಿಕುಡಿದು
ತೃಷೆಯನಾರಿಸಲೆಂದು ನಿನ್ನೆಡೆಗೆ ಬಂದಿಹೆನು.
ವ್ಯೈಮರೆತ ರಕ್ಕಸಾ! ಮೊದಲ ತುತ್ತಿನ ಸವಿಯ
ಸವಿನೋಡು ಕಾಮುಕಾ! ( ಒದ್ದು ಕೆಡಹುವನು. )
ಕೀಚಕ [ ಕಕ್ಕಾಬಿಕ್ಕಿಯಾಗಿ ಮೇಲೆದ್ದು ]— ಕೀಚಕನ ಒದೆದವನು
ಯಮಪುರಿಯನೈದುವನು. ರಕ್ಕಸಿಯ ಮೋಸವಿದು,
ಸೇವಕನು ನೀನಲ್ಲ. ನೂರು ಜಟ್ಟಿಗಳೆನ್ನ
ಅಲುಗದೆಯೆ ಹೋಗಿಹರು. ಒದೆದೆನ್ನ ಕೆಡವಿರುವ
ಬಲಶಾಲಿ ನೀನೊಬ್ಬ ಜಗದಿ ಬಾಳುವನೊಬ್ಬ,
ಯಾರಾದರೆನಗೇನು ನಿನ್ನಾಯು ತುಂಬಿಹುದು.
( ಧಾವಿಸಿ ಬರುತ್ತಿರುವಾಗ ಸೈರಂಧ್ರಿಯ ದನಿ ಕೇಳಿ ತಡೆದು ನಿಲ್ಲುವನು )
ಸೈರಂಧ್ರಿ—ಜಟ್ಟಿಗಳ ಗಂಡನಿವ! ಕೀಚಕನ ಜವರಾಯ!
ಹದಿಬದೆಯ ಸವಿನೋಡು! ಕಣ್ಣು ಹರಿಯುವವರೆಗೆ
ಕೆಕ್ಕರಿಸಿ ನೋಡಿತ್ತ; ನಿನ್ನಾಯು ತುಂಬಿಹುದ
ಕಣ್ಣಾರೆ ಕಾಣೊಮ್ಮೆ! ಮಾನಿನಿಯ ಕೆಣಕಿರುವ
ನಿನಗಿನ್ನು ಉಳಿಗಾಲವಿಲ್ಲವೆಲೆ. ಎನ್ನೆರೆಯ!
ಕೆಕ್ಕರಿಸಿ ನೋಡುತಿಹ ಕಣ್ಣೊಡೆದು, ಮುಡಿಹಿಡಿದು
ನೋಯಿಸಿದ ಕೈಮುರಿದು ಕೊರಲರಿದು, ಗಂಟಲಿನ
ನೆತ್ತರನು ಹಣೆಗಿಕ್ಕು. ಪುಂಡತನದಲಿ ಕೊಬ್ಬಿ
ಕಂಡ ಹೆಣ್ಣುಗಳನ್ನು ಕೆಡಿಸಿರುವ ಕಾಮುಕನ
ಕೊರಳದುಮಿ ಕೊಂದುಬಿಡು........
ಕೀಚಕ ( ಸೈರಂಧ್ರಿಯ ಮೇಲೇರಿ ಹೋಗಿ-- ) ಚಾಂಡಾಲ ಘಾತುಕಿ!
ಮೂರು ಲೋಕವ ಮೀರಿ ನಿಂತಿರುವ ಕೀಚಕನ

ಮತ್ತೊಬ್ಬ ಕೊಲ್ಲುವನೆ? ನಂಬುಗೆಯ ಕೊಲೆಮಾಡಿ
ನಿಂತಿರುವ ಸೈರಂಧ್ರಿ! ಮೋಸವೆಸಗಿದ ಹೆಣ್ಣೆ!
ಮೊದಲು ನಿನ್ನನು ಕೊಂದು ಸೇವಕನ ನೋಡುವೆನು
ಕೀಚಕನ ಕೆಣಕಿದರೆ ಸೊಗವಾವುದೆಂಬುದನು
ಚಣದಲ್ಲಿ ತೋರಿಸುವೆ. ( ಧಾವಿಸುವನು. ಭೀಮನು ಅಡ್ಡಬಂದು ಕೀಚಕನನ್ನು ಅದುಮಿ ಹಿಡಿದು ಕೆಡವಿ ಗುದ್ದ ಹತ್ತುವನು. )

**ಸೈರಂಧ್ರಿ** ( ವಿಕಟವಾಗಿ ನಗುತ್ತ )— ನೋಡಿದುವು ನಿನ್ನೆದೆಗೆ!
ಮುಡಿಹಿಡಿದ ದೋಷಕ್ಕೆ! ನೋಡಿರುವ ನೋಟಕ್ಕೆ!

**ಕೀಚಕ** ( ಒದ್ದಾಡುತ್ತ )—
ಜಟ್ಟಿಗಳ ಕೈಚಳಕ ಕಲಿತಂತೆ ತೋರುತಿದೆ,
ಮೆಟ್ಟುವೆನು, ದೂರಸರಿ, ಜಗಜಟ್ಟಿಯಾದವನ
ಸಿಟ್ಟಿಗೆಬ್ಬಿಸಬೇಡ.

**ಸೇವಕ** ( ಕೊರಳದುಮುತ್ತ )— ನಿನ್ನ ಸಿಟ್ಟಿನ ಕೇಡು
ನಿನ್ನಾಯು ಕುಡಿಯುವುದು. ಭಂಡಮಾತುಗಳಿಂದ
ಹದಿಬದೆಯ ನೋಯಿಸಿದ ಪುಂಡನಾಲಿಗೆಯನ್ನು
ಚಣದಲ್ಲಿ ಹೊರಗೆಳೆದು ನಿನ್ನುಸಿರ ಹೀರುವೆನು;
ನಿನ್ನೊಡಲ ಸೀಳುವೆನು.

( ಕೊರಳನ್ನು ಇನ್ನೂ ಜೋರಾಗಿ ಒತ್ತಹತ್ತುವನು ).

**ಕೀಚಕ** ( ಸಂಕಟದಿಂದ )— ಸಡಿಲುಬಿಡು! ಸಡಿಲುಬಿಡು!
ಘಾತುಕಿಯ ಕೊಲ್ಲುವೆನು. ಅಕಟ-ಕ-ಟ ಉಸಿರು ಕ
ಟ್ಟುತಲಿ-ಹು-ದು....ನೀ-ನಾ-ರು-....ಸೇ-ವ-ಕಾ! ಸೇ-ವ-ಕ. ನು
ನೀ-ನ-ಲ್ಲ....ನಿ-ನ್ನ-ಹಿ-ಡಿ-ತ-ದ ನೋ-ವು ಭೀ-ಮ-ನ-ನು....

**ಸೈರಂಧ್ರಿ** ( ಆತುರಳಾಗಿ )—
ಮಾತು ಮುಗಿಯುವ ಮುನ್ನ ಮಾತುಬಾರದ ತೆರದಿ
ನೀಚನನು ಮುಗಿಸಿಬಿಡು. ನಮ್ಮ ಗುರುತನು ಹೇಳಿ
ಸಂಕಟವ ತರುವಂತೆ ತೋರುತಿದೆ ಪಾಪಾತ್ಮ!

ಕೊನೆಗಾಲದಲ್ಲಿಯೂ ಪಾಪಿಗಳ ಜೀವನವು
ವಿಷದುಸಿರ ಬೀಸುವದು; ಕೇಡುಗಳನೊಡ್ಡುವದು.

**ಕೀಚಕ** ( ಕಟ್ಟುಸಿರಿನಿಂದ )—
ಘಾ-ತು-ಕೀ ! ಚಾಂ-ಡಾ-ಲೀ ! ಮೋ-ಸ-ಮಾ-ಡಿ-ದ ಮಾ-ರಿ !
ಸೈರಂ-ಧ್ರಿ ನೀ-ನ-ಲ್ಲ. ಪಾಂ....ಚಾ....ಲಿ....

[ ಪ್ರಾಣೋತ್ಕ್ರಮಣವಾಗುವದು. ]

**ಭೀಮ** ( ಸಿಂಹನಾದ ಮಾಡಿ ಕೀಚಕನ ಎದೆಯಮೇಲೆ ಕಾಲಿಟ್ಟು )—
ಸೇಡು ಸೇ
ಡೆಂದೆನ್ನ ಕಾಡುತಿಹ ದ್ರೌಪದೀ ! ಸೇಡಿನಾ
ಹುತಿ ನೋಡಿ ಕುಣಿಕುಣಿದು ತೇಗೊಮ್ಮೆ.

**ಸೈರಂಧ್ರಿ** ( ಆನಂದೋನ್ಮಾದದಿಂದ )— ಜಯವಿರಲಿ
ಕಲಿ ಭೀಮ ! ಮಾನರಕ್ಷಕ ನೀನು. ಮಾನಿನಿಯ
ಕಾಯ್ದವನು ನೀನೆನ್ನ ಪರಮಾತ್ಮ ಎನ್ನೆರೆಯ !

[ ಸೈರಂಧ್ರಿಯು ಆನಂದಾಶ್ರುಗಳನ್ನು ಉದುರಿಸುತ್ತ ಭೀಮನನ್ನು ತಬ್ಬುತ್ತಿರಲು, "ಕೆಡಬೇಡ ಕೀಚಕಾ! ತಡವದಿರು ಮಾನಿನಿಯ" ಎನ್ನುತ್ತ ಸುಧೇಷ್ಣೆಯು ತೆರೆಯ ಒಂದು ಮಗ್ಗುಲಿಂದ ಓಡಿಬರುವಳು. ಅಲ್ಲಿ ಅಸ್ತವ್ಯಸ್ತವಾಗಿ ಬಿದ್ದ ಕೀಚಕನ ಹೆಣವನ್ನೂ ಭಯಂಕರನಾಗಿ ಕಾಣುವ ಬಲ್ಲವನನ್ನೂ ರಣಚಂಡಿಯಂತೆ ಕಾಣುತ್ತಿರುವ ಸೈರಂಧ್ರಿಯನ್ನೂ ನೋಡಿ ದಿಂಙ್ಮೂಢಳಾಗುವಳು. ಕಡೆಗೆ ಕೀಚಕನ ಹೆಣದ ಹತ್ತಿರ ಹೋಗಿ "ಹಲವು ಕೊರಳಾದವನ ಗತಿಯಾಯಿತಕ್ಕಟ" ಎಂದು ಉದ್ಗಾರ ತೆಗೆಯುತ್ತಿರಲು ಬಲ್ಲವನು ವಿಕಟವಾಗಿ ನಗುವನು. ಆ ಭಯಂಕರ ನಗುವಿಗೆ ಬೆದರಿ ಸುದೇಷ್ಣೆಯು ಚಿಟ್ಟನೆ ಚೀರಿ ದೊಪ್ಪನೆ ಹೆಣದ ಮೇಲೆ ಬಿದ್ದು ಮೂರ್ಛೆಹೋಗುವಳು. ಆ ಕ್ಷಣದಲ್ಲಿ ಇನ್ನೊಂದೆಡೆಯಿಂದ ಧರ್ಮರಾಜನು ಅರ್ಜುನನೊಡನೆ ಓಡಿಬಂದು ]

ಕಣ್ಣೊಡೆವ ನೋಟವಿದು ! ಏನು ಮಾಡಿದೆ ಭೀಮ ?
ನಿನ್ನಾಟ ಸೈರಂಧ್ರಿ !

[ ಎನ್ನುತ್ತ ಹೆಣವನ್ನೂ ಅದರ ಮೇಲೆ ಬಿದ್ದಿರುವ ಸುಧೇಷ್ಣೆಯನ್ನೂ ನೋಡಹತ್ತುವನು ಇದೆಲ್ಲದರ ಪರಿವೆಯೇ ಇಲ್ಲದಂತೆ ಭೀಮಸೇನನು ಧರ್ಮರಾಜನನ್ನು ನೋಡಿ ತನ್ನ ನಿಜ ರೂಪವನ್ನು ಕೂಡ ಮರೆತು ಆವೇಶದ ದನಿಯಲ್ಲಿ ]

ಭೀಮ — ಸೇಡು ಸೇಡೆಲೆ ಸೇಡು !

ಸೇಡು ತುಂಬಿದ ಪಾಡ ನೋಡಿಲ್ಲಿ ಧರ್ಮಜಾ !
ನೀನೆಳೆದ ಗೆರೆದಾಂಟಿ ಕೀಚಕನ ಕೊಂದಿಹೆನು
ನೀನೆನ್ನ ಕ್ಷಮಿಸುವುದು. ಕೌರವನ ನೆತ್ತರಲಿ
ಹಸಿವಾಂತು ರಣಚಂಡಿಯಾಹುತಿಯ ಬೇಡಿದಳು;
ಹಸಿಹಸಿದು ಹಸಿವಾದ ಬಯಲೊಡಲ ತೋರಿದಳು,
ಉನ್ಮತ್ತಕೀಚಕನ ನೆತ್ತರೆಡೆಯನ್ನಿಟ್ಟು
ಶಾಂತವಾಗಿಡೆನಿಂದು ಹಸಿವಾಂತ ಚಂಡಿಯನು.
ಕೌರವನ ರಕ್ತಕ್ಕೆ ಕೀಚಕನ ನೆತ್ತರೆಡೆ
ನೈವೇದ್ಯ ಕೇಳಣ್ಣ ! ಪಾಂಡವರ ಕುಲಪತ್ನಿ
ದ್ರುಪದರಾಜನ ಕುವರಿ — ಕೌರವನ ಮಾಯೆಡೆಯು
ಬರುವನ್ನ ತೆತ್ತಿರುವ — ರಣಚಂಡಿಗಿತ್ತಿರುವ
ನೆತ್ತರಿನ ನೈವೇದ್ಯ ! ಕೀಚಕನ ನೈವೇದ್ಯ !

( ಭೀಮನು ಉದ್ದಾಮನಂತೆ ಸಿಂಹನಾದ ಮಾಡುವನು. ಧರ್ಮರಾಜನು ವಿಲಕ್ಷಣವಾದ ಕಳವಳದಿಂದ ಒಮ್ಮೆಲೆ ಭೀಮನೆಡೆಗೆ ಹೋಗಿ )

ಬಾಯಿಬಿಗಿ ಬಲ್ಲವಾ ! ಅಜ್ಞಾತವಾಸವಿದೆ....

( ಎನ್ನುತ್ತ ಅವನ ಬಾಯಿಯನ್ನು ತನ್ನ ಕೈಯಿಂದ ಮುಚ್ಚುವಷ್ಟರಲ್ಲಿ ಇನ್ನೊಂದೆಡೆಯಿಂದ ವಿರಾಟರಾಜನು ಓಡಿಬರುವನು. ಅವನು ಕಕ್ಕಾಬಿಕ್ಕಿಯಾಗಿ ಒಮ್ಮೆ ಹೆಣದ ಕಡೆಗೆ, ಇನ್ನೊಮ್ಮೆ ಮೂರ್ಛೆಹೋದ ಹೆಂಡತಿಯ ಕಡೆಗೆ, ಮತ್ತೊಮ್ಮೆ ಸೈರಂಧ್ರಿಯ ಕಡೆಗೆ, ಮಗದೊಮ್ಮೆ ಬಲ್ಲವನ ಕಡೆಗೆ ನೋಡುತ್ತಿರಲು )

ತೆರೆ.

# ಮುನ್ನುಡಿ



ಫಿನ್, ಇಂಗೆಲ್ಡ್, ಅಂಗೆನ್‌ಥಿಯೋವ್ ಮೊದಲಾದ ಎಂಗ್ಲೊ ಸ್ಯಾಕ್ಸನ್ ಹಾಗು ಡೇನಿಶ್ ವೀರರ ಕಥೆಗಳನ್ನು ನೋಡಿದಾಗ ಇತಿಹಾಸ ಪೂರ್ವ ಕಾಲದ ಸ್ಥಿತಿಗತಿಗಳು ನಮಗೆ ಸ್ಪಷ್ಟವಾಗಿ ಕಾಣುತ್ತವೆ. ಇವು ಬರಿ ದಂತಕಥೆಗಳಲ್ಲ. ಅನೇಕ ಜನ ಪಾಶ್ಚಿಮಾತ್ಯ ವಿದ್ವಾಂಸರು ಪರಿಶ್ರಮ ಪಟ್ಟು ಸಂಶೋಧಿಸಿ ಈ ಕಥೆಗಳಲ್ಲಿ ಬಹುಪ್ರಮಾಣವಾಗಿ ಅಡಕವಾಗಿರುವ ಇತಿಹಾಸವನ್ನು ಕಂಡುಹಿಡಿದಿದ್ದಾರೆ. ಸೋಹ್ರಾಬ್-ರುಸ್ತುಂರ ಕಥೆಯಲ್ಲಿ ಸಹ ಇತಿಹಾಸವು ಅಡಕವಾಗಿರುವದು ಮೇಲೆಯೇ ಕಾಣುತ್ತದೆ.

ಇದೇ ಮಾದರಿಯಲ್ಲಿ ಬೆಳೆದು ಬಂದಿದ್ದ ನಮ್ಮ ಕಥೆಗಳಲ್ಲೂ ಇತಿಹಾಸಪೂರ್ವ ಕಾಲದ ಸಾಮಾಜಿಕ ಸ್ಥಿತಿಯು ಅಡಕವಾಗಿರುವದು ಸಹಜವಾಗಿದೆ. ಆದರೆ ಅನೇಕ ಶತಮಾನಗಳ ಸುಳಿಯಲ್ಲಿ ಸಿಕ್ಕಿ ಬದಲಾವಣೆ ಹೊಂದಿದ ಈ ಕಥೆಗಳಲ್ಲಿಯ ಮೂಲ ವಿವರಗಳನ್ನು ಗೊತ್ತು ಹಿಡಿಯಲು ವಿದ್ವತ್ಪೂರ್ಣವಾದ ಪ್ರತಿಭೆ ಬೇಕು.

ಒಮ್ಮೊಮ್ಮೆ ಪುರಾತನ ಕಾಲದ ಸಾಮಾಜಿಕ ಸ್ಥಿತಿಯು ತಿಳಿಯದೆ ಹೋಗಿ ಆ ಕಾಲದಿಂದ ಬಂದ ಕಥೆಗಳ ರೀತಿಯು ಅರ್ಥವು ಗೊತ್ತಾಗದೆ ಅವುಗಳನ್ನು ನಾವು ಬದಲಿಸುತ್ತೇವೆ. ಇದರಿಂದ ಆ ಕಥೆಗಳಲ್ಲಿಯ ಇತಿಹಾಸದಿಂದ ನಾವು ಇನ್ನಿಷ್ಟು ದೂರವಾಗುತ್ತೇವೆ. ಪತಿ-ಪುತ್ರರ ಯುದ್ಧವನ್ನು ಅಸಹಾಯರಾಗಿ ಕೇಳುವ ಇಲ್ಲವೆ ನೋಡುವ ಸೀತಾ-ಚಿತ್ರಾಂಗದೆಯರು ಹಿಲ್ಡೆಬೂರ್ ಫ್ರಿಯಾವಾರು ಮೊದಲಾದ ಡೇನಿಶ್ ಮಹಿಳೆಯರು ಅನುಭವಿಸಿದ ಕಷ್ಟಪರಂಪರೆಯನ್ನೇ ಒಂದಿಲ್ಲೊಂದು ರೀತಿಯಿಂದ ಅನುಭವಿಸಿದವರೆಂದು ಹೇಳಬೇಕಾಗುತ್ತದೆ.

ಶ್ರೀಮಾನ್ ಪುರಾಣಿಕರವರು ಅರ್ಜುನ-ಬಭ್ರುವಾಹನರ ಕಥೆಯನ್ನು ಇದ್ದಕ್ಕಿದ್ದ ಹಾಗೆ ಇಟ್ಟಿದ್ದಾರೆ. ಲಕ್ಷ್ಮೀಶನಲ್ಲಿರುವ ಚಮತ್ಕಾರ ಪ್ರಯೋಗವನ್ನು ಮಾತ್ರ ಬಿಟ್ಟುಕೊಟ್ಟು ಅವರು ಕಥೆಯನ್ನು ಆವಿದ್ಧ ಪ್ರಯೋಗವನ್ನಾಗಿ ಮಾಡಿದ್ದಾರೆ. ಅರ್ಜುನನು ತನ್ನ ತಂದೆಯೆಂದು ತಿಳಿದ ಮೇಲೆ ಸಹ ಬಭ್ರುವಾಹನನು ಅವನೊಡನೆ ಯುದ್ಧಮಾಡುವದು ಸಾಧ್ಯವಿಲ್ಲವೆಂದು ಒಮ್ಮೊಮ್ಮೆ ನಮಗೆನಿಸುವುದುಂಟು. ಆದರೆ ಅರ್ಜುನ-ಬಭ್ರುವಾಹನರು ಇದ್ದಿರಬಹುದಾದ ಸಮಾಜದಲ್ಲಿ ಇಂಥ ಸನ್ನಿವೇಶಗಳು ದಿನದ ಮಾತಾಗಿದ್ದವೆಂಬುದನ್ನು ನಾವು ನೆನಪಿನಲ್ಲಿಡಬೇಕು. ಮಸುಕು-ಮಸುಕಾದ ನೆನಪೊಂದನ್ನು ಬಿಟ್ಟರೆ ಅರ್ಜುನನು ಲಕ್ಷ್ಮೀಶನಲ್ಲಿಯ ಅರ್ಜುನನೇ ಆಗಿದ್ದಾನೆ. ಯಜ್ಞಾಶ್ವವನ್ನು ಕಟ್ಟಿಹಾಕಿದ ವೀರನು ಯುದ್ಧಮಾಡದೆ ಗೌರವಿಸಲು ಬಂದಲ್ಲಿ ಅವನು ತನ್ನ ಮಗನಲ್ಲ ವೈಶ್ಯನ ಮಗನೆಂಬ ಅರ್ಜುನನ ಮಾತು ಆತನು ಇದ್ದಿರಬಹುದಾದ ಸಮಾಜದ ರೂಢಿಯಷ್ಟು ಪ್ರಾಚೀನವಾಗಿದೆಯೆಂದು ನನಗೆನಿಸುತ್ತದೆ. "ಕುಣಿದಾಡಿದವು ಮರುಳ ರಣರಂಗದೊಳ್ನಾಟ್ಯರಚನೆ ಮೆರೆಯೆ" ಎಂಬ ಲಕ್ಷ್ಮೀಶನ ವರ್ಣನೆಯನ್ನು ಅವಲಂಬಿಸಿ "ಗಧಾಯುದ್ಧ" ದ ಪರಂಪರೆಯನ್ನು ಹಿಡಿದು ಶ್ರೀ. ಪುರಾಣಿಕರು ರಮ್ಯವಾದ ಮರುಳ್ಗಳ ಪ್ರವೇಶವನ್ನೊಂದನ್ನು ಈ ದೃಶ್ಯಕಾವ್ಯದಲ್ಲಿ ಪವಣಿಸಿದ್ದಾರೆ.

"ನೆತ್ತರಿಲ್ಲಿ, ನೆತ್ತರಲ್ಲಿ
ನೆತ್ತರೆಲ್ಲಕಡೆಗಿದೆ.
ಎತ್ತಹೋದರತ್ತಲದುವೆ
ಮಡುವುಗಟ್ಟಿ ನಿಂತಿದೆ"

ಎಂದು ಮೊದಲಾಗಿ ಮುಂದುವರಿಯುವ ಭಾಗವು ಬಹಳ ರಮಣೀಯವಾಗಿದೆ.

ಶ್ರೀಮಾನ್ ಪುರಾಣಿಕರವರ ಕವನಗಳನ್ನು ಅನೇಕರು ಈಗಾಗಲೆ ಓದಿ ಸಂತೋಷಪಟ್ಟಿದ್ದಾರೆ. ಸರಳ ರಗಳೆಯಲ್ಲಿ ಕಾವ್ಯರಚನೆಗೆ ಆರಂಭವಾಗಿ ಅನೇಕ ವರ್ಷಗಳಾದರೂ ಸರಳ ರಗಳೆಯು ತನ್ನ ನವೀನತೆಯನ್ನು

ಕಳೆದುಕೊಂಡಿಲ್ಲ. ದೃಶ್ಯಕಾವ್ಯಗಳಲ್ಲಿ ಹೆಚ್ಚಾಗಿ ಅದು ಬಳಕೆಗೆ ಬಂದ
ರಂಗಭೂಮಿಗೆ ಸಂಬಂಧಿಸಿದ ಅದರ ಭವಿತವ್ಯತೆಯು ಇನ್ನೂ ನಿರ್ಣಯ
ವಾಗಬೇಕಾಗಿದೆ. ಇಂಥ ಹೊತ್ತಿನಲ್ಲಿ ‘ಮಗನ ಗೆಲುವಿ’ ನಂಥ
ದೃಶ್ಯಕಾವ್ಯಗಳು ಬೆಳಕಿಗೆ ಬರುವದು ಅಗತ್ಯವಾಗಿದೆ. ಶ್ರೀಮಾನ್
ಪುರಾಣಿಕರ ಶೈಲಿಯಲ್ಲಿ ಬಿಗುವಿದೆ; ಅವರ ಸರಳ ರಗಳೆಯಲ್ಲಿ ನಿರರ್ಗಳ
ವಾದ ಓಟವಿದೆ. ‘ಸೈರಂಧ್ರಿ’ ಯಲ್ಲಿ ಕಾವ್ಯದ ಹದವು ಇನ್ನೂ ಚನ್ನಾಗಿ
ಸಾಧಿಸಿದೆ. ಇಂಥ ಅನೇಕ ಕೃತಿಗಳಿಂದ ಸರಳ ರಗಳೆಯು ಪ್ರಾಂತಕ್ಕೆ
ಅವರು ಇನ್ನೂ ಹೆಚ್ಚಿನ ವಿಸ್ತಾರವನ್ನು ಕಲ್ಪಿಸಿಕೊಡಲೆಂದು ನಾನ
ಹಾರೈಸುತ್ತೇನೆ. ಇಂದಿನ ಕವಿಗಳ ಕೃತಿಗಳಲ್ಲಿ ಹೊಸ ಕಾವ್ಯದ
ಪ್ರಯೋಗಾಭಿಲಾಷೆಯು ಹೇಗೆ ಹೆಚ್ಚಳದಿಂದ ಮುಂದುವರಿದಿದೆಯೆಂಬು
ದನ್ನು ತಿಳಿಯಬಯಸುವವರು ‘ಮಗನ ಗೆಲುವ’ ನ್ನು ಅವಶ್ಯವಾಗಿ
ಓದಬೇಕು.

ಧಾರವಾಡ
೨೭–೩–೧೯೪೭

ವಿ. ಕೃ. ಗೋಕಾಕ.

# ಮಗನ ಗೆಲುವು

## ದೃಶ್ಯ ೧

( ಮಣಿಪುರೇಶ್ವರಿಯ ಗುಡಿ. ಚಿತ್ರಾಂಗದೆಯು ದೇವಿಯ ಆರಾಧನೆಯಲ್ಲಿದ್ದಾಳೆ. )

**ಚಿತ್ರಾಂಗದೆ** ( ಮೊಂಡೆಯೂರಿ ಕೈಜೋಡಿಸಿ )—

ನಿಮಿಷಗಳು ಮಾಸದಲಿ, ಮಾಸಗಳು ವರುಷದಲಿ
ಕೂಡಿ ಹೋದವು ತಾಯೆ! ಇನ್ನೆನಿತು ಕಾಲವನು
ನೂಕಿ ಬಳಲುವೆನಮ್ಮ? ನಲ್ಲನಗಲಿದ ನೋವು
ಮೇಣವನ ಪ್ರೇಮಮಯ ಮೂರುತಿಯ ದಿವ್ಯನೆನ
ಹದು ದೇವಿ! ದಿನದಿನವು ಹೆಚ್ಚುತಿಜೆ. ನಿಮಿಷನಿಮಿ
ಷವು ಆಶೆ ಬಲಿಯುತಿದೆ. ಭರವಸೆಯ ಹಂಬಲಲಿ
ತೂಗುತಿದೆ ಮನವಕ್ಕಿ, ಬಾಗುತಿದೆ ಎದೆವಕ್ಕಿ.
ಬಾರನೋ? ಬರುವನೊ? ಇನ್ನೆಂದು ಕೂಡನೋ?
ಎಂದೆನ್ನ ಎದೆಯೊಲವೆ ಕೇಳುತಿದೆ ನೇರೆನ್ನ.
ಪತಿದೇವಗೆಂತೆನ್ನ ವಿಸ್ಮೃತಿಯೊ? ಪ್ರೇಮಮಯ
ನವನಲ್ತೆ ಆ ಪಾಂಡುನಂದನನು? ಹೇ ದೇವಿ!
ರಾಜ್ಯವಿದೆ, ಭಾಗ್ಯವಿದೆ, ಯೋಗ್ಯ ಸಂತಾನವಿದೆ
ಇರಲೇನು? ಸೌಭಾಗ್ಯದರಸನನು ಕಾಣದಿಹೆ.

( ಕಣ್ಣೀರ ಮಿಡಿದು, ಆರತಿಯೆತ್ತಿ )

ಮಂಗಳವು ನಿನಗಮ್ಮ, ಮಂಗಳಾಂಗನೆ, ತಾಯೆ,
ನಿನ್ನ ಪೂಜೆಯ ಬಲದಿ ನಲ್ಲನೈತರಲಮ್ಮ!
ನನ್ನೆದೆಯ ಗದ್ದುಗೆಯ ಸಿಂಹಪೀಠದ ಮೇಲೆ
ರಾಜಿಪನು ಬರಲಮ್ಮ! ನನ್ನರಿವು ನಿನಗಮ್ಮ!

( ತಟ್ಟೆಯನ್ನು ಕೆಳಗಿಡುತ್ತಿರಲು ತೆರೆಯಲ್ಲಿ ಸದ್ದು )

ಯಾರಲ್ಲಿ ? ಕಪಿಲೆಯೇ ಸಂತಸದ ಜಯನಾದ
ವೇನಮ್ಮ ದಾಸಿ ?

**ಕಪಿಲೆ—** ನಮಿಸುವೆನು ತಾಯಿ ! ಪರಿವಾರ
ವೆಲ್ಲವದು ಓಲಗಕೆ ಸಾಗುತಿದೆ.

**ಚಿತ್ರಾಂಗದೆ** ( ಏನೂ ತಿಳಿಯದವಳಂತೆ )— ಇಂದೇಕೆ ?

( ತೆರೆಯು ಮುಂದೆ ಬಂದು )

**ಕಪಿಲೆ—** ಅಶ್ವಮೇಧದ ಹಯವ ಕಟ್ಟಿಹರು ನಮ್ಮವರು.
ತುರಗವನು ಬಿಗಿದಲ್ಲಿ ಆಹವವು ನಿಜವಂತೆ.

**ಚಿತ್ರಾಂಗದೆ** ( ಆತುರಳಾಗಿ )— ಮುಂದೇನು ?

**ಕಪಿಲೆ—** ಭಟರನೆಲ್ಲರ ನೆರಸಿ ಓಲಗವ
ಕರೆದಿಹನು ನಮ್ಮ ದೊರೆ ಕಾಳಗಕೆ ಕರೆಯಲ್ಕೆ.

**ಚಿತ್ರಾಂಗದೆ** ( ತನ್ನಲ್ಲಿ )— ಇದೇನೀ ಯನರ್ಥವು ! ಪಾಂಡವರ ಕೆಣಕುತಿಹ
ಕೀಳ್ಮನವು ! ( ಹೊರಗೆ ) ಕಪಿಲಮ್ಮ ಹಯದೊಡೆಯನಾರಮ್ಮ ?

**ಕಪಿಲೆ—** ನರನಂತೆ !

**ಚಿತ್ರಾಂಗದೆ** ( ಹರ್ಷದಿಂದ )— ಸಕಲಾತಿಯುಡುಗರೆಯು ನಿನಗಮ್ಮ !
ಎನ್ನೊಡೆಯ ಬಂದಿಹನು ಬೇಗನಡೆಯೋಲಗಕೆ.
ನಿಮ್ಮ ದೊರಯುನಿತರಲಿ ಕಾಳಗವ ಹೂಡುವನು.
ಸಂಬಂಧವರಿಯವಲೆ ನನ್ನಣುಗ ಕೆಡಬಹುದು
ಬೇಗನಡ ನಿಲ್ಲದಿರು

**ಕಪಿಲೆ** ( ಅವಸರದಿಂದ )— ಹೀಗೆ ಬಾ ತಾಯಮ್ಮ !

**ಚಿತ್ರಾಂಗದೆ** ( ತನ್ನಲ್ಲಿ )—
ಹೀಗೇಕೆ ಮನದೊಲವು ಕುಣಿಯುತಿದೆ, ಸಂತಸದಿ
ಮುಳುಗುತಿದೆ ! ಸುಮ್ಮನಿರು ಹೃದಯವೇ, ನಿನ್ನೊಲುಮೆ
ಫಲಿಸುತಿಹ ಕಾಲಬಂದಿಹುದಿಂದು. ( ಹೊರಗೆ ) ಹೇ ದೇವಿ !
ಕಡೆಗೊಮ್ಮೆ ನಿನ್ನೊಲವ ನೀಡಿದೆಯ ನನಗಿಂದು

ಪೆಣ್ಣೊಡಲ ಪರಿತಾಪ ಬಲ್ಲವಳು ನೀನಲ್ತೆ !
ನನ್ನೊಡತಿ ! ( ವಿಚಾರಿಸಿ ) ಚಣವೊಂದ ಕಳೆಯುವದು ಕೇಡೀಗ
ಓಲಗಕೆ ನೇರ್ನುಗ್ಗಿ ತನುಜನಲಿ ತುಂಬಿರುವ
ಹಗೆತನವನಳಿಸುವೆನು. ಪಿತನೊಡನೆ ಹಗೆತನವೆ ?
ಸಂಬಂಧವರಿತ ಮೇಲೆಂತು ಕಾದುವನವನು
ನನ್ನಣುಗ. ನನ್ನ ಮುದ್ದಿನ ಕಂದ ? ಕುಲದೇವಿ,
ಇನ್ನೆರಡು ಗಳಿಗೆಯಲಿ ನಲ್ಲನೊಡನೈತಂದು
ಆರತಿಯ ಬೆಳಗುವೆನು. ಬಾಸಿಗವ ಮುಡಿಸುವೆನು.
ನನ್ನೊಡತಿ ನೀನಮ್ಮ ! ಮಣಿಪುರದ ಮಾದೇವಿ !

[ ಅವಸರದ ಆತುರದದನಿಯುಲ್ಲಿ ]

ಬೇಗನಡಿ ಕಪಿಲಮ್ಮ ! ಓಡುತೋಡುತ ಸಾಗಿ
ಓಲಗವ ಸೇರೋಣ.

( ಇಬ್ಬರೂ ತೆರಳುವರು. )

## ದೃಶ್ಯ ೨

[ ಮಣಿಪುರದ ಆಸ್ಥಾನಮಂಟಪ. ಬಭ್ರುವಾಹನನು ವೀರರೆಲ್ಲರನ್ನೂ ಕೂಡಿಸಿದ್ದಾನೆ. ]

**ಬಭ್ರುವಾಹನ** ( ನೆರೆದ ವೀರಭಟರನ್ನೆಲ್ಲ ಒಮ್ಮೆ ನೋಡಿ, ವಂದಿಸಿ )—

ಮಣಿಪುರದ ಮಾನದಭಿಮಾನಿಗಳೆ! ಪರಕೀಯ
ಮಂಡಲಸ್ಥಲದಿಂದ ಬಂದರಾಯರ ಹಯವ
ಬಿಗಿದಾಯ್ತು. ಕಾಳೆಗವ ನಾವಾಗಿ ಕರೆದಾಯ್ತು.
ಜಗದೇಕ ಮಲ್ಲನೆಂದುಬ್ಬಿಬಂದಿಹ ಭಟನ
ಕೋಡಕೀಳುವಸಾಸ, ಚಂಡವಿಕ್ರಮರಾದ
ಗಂಡುಗಲಿಗಳ ಕಡೆಗೆ. ಮಣಿಪುರದ ಬೀರರಿರ!
ಮಣಿಪುರದ ಮಾನವನು ಕಾಯುವದು ನಿಮ್ಮೆಡೆಗೆ,
ನಿಮ್ಮ ಸಾಹಸದೆಡೆಗೆ, ನಿಮ್ಮ ಶಕ್ತಿಯ ಕಡೆಗೆ....

( ವೀರರು ಉತ್ಸಾಹಪ್ರದರ್ಶನ ಮಾಡುತ್ತಿರುವಾಗ ಚಿತ್ರಾಂಗದೆಯ ಪ್ರವೇಶ )

**ಚಿತ್ರಾಂಗದೆ**—ಒಳಿತುಮಾಡಿದೆ ಕಂದ! ಜನ್ನ ಹಯ ಬಿಗಿದಾಯ್ತೆ?

( ರಾಜಮಾತೆಯ ದನಿಕೇಳಿ ಸಭೆಯಲ್ಲಿ ಜಯಜಯಕಾರ. ಜಯಜಯಕಾರದ ದನಿ ಯಡಗುತ್ತಿರುವಾಗ ಬಭ್ರುವಾಹನನು ಮೇಲೆದ್ದು ಉತ್ಸಾಹದಿಂದ )

**ಬಭ್ರುವಾಹನ**—ಮೇಲೆ ಬಾ! ಮಾತಾಯಿ ಮಣಿಪುರದ ಭಾಗ್ಯಸಿರಿ!
ನೀನಮ್ಮ! ಕ್ಷತ್ರಿಯರ ಪಂತದಿಂದೆಳೆಸಿದೆನು
ವಾಜಿಯನು. ನಿನ್ನಣುಗನೆಸಗಿದದು ಸೊಗಮಲ್ತೆ?

**ಚಿತ್ರಾಂಗದೆ** [ ವ್ಯಂಗ್ಯವಾಗಿ ]—

ಒಲ್ಸೊಗಸು! ಮುದ್ದು ಸುತ ಎನ್ನೊಡಲ ತಣಿಸಿದೆಯೊ!
ಆತ್ಮಭವ ಜನಕವಧೆಗಳುಕದವನೆಂದೆಂಬ
ಖ್ಯಾತಿಯನು ಪಡೆವವನು ನೀನಲ್ತೆ?....

**ಬಭ್ರುವಾಹನ** ( ಅಚ್ಚರಿಯಿಂದ )— ಏನಮ್ಮ?
ಪಿತನಾರು? ವಧೆಯೇನು? ನಿನ್ನೊಗಟನೊಡೆಯುವದೆ
ಕಠಿಣವಿದೆ. ನಿಜಧರ್ಮವನುಸರಿಸಿ ತೇಜಿಯನು

ಬಿಗಿಸಿದರೆ ತಪ್ಪೇನು ತಾಯಮ್ಮ? ಪಾರ್ಥಿವರ
ಪಂತವನು ಕಾಯುವದು ಸರಿಯಲ್ತೆ? ನಿನ್ನ ದನಿ
ಯಲ್ಲಿಂತು ವ್ಯಂಗ್ಯವಾಡುತಲಿಹುದು ನನಗಂತು
ಅಚ್ಚರಿಯು!

**ಚಿತ್ರಾಂಗದೆ** (ಸ್ಪಷ್ಟದನಿಯಲ್ಲಿ)—ಅಚ್ಚರಿಯು ದನಿಯಲ್ಲ ಕೇಳ್ಮಗೂ!
ಪಾರ್ಥಂಗೆ ನಾ ಪತ್ನಿ; ಮುದ್ದುಸುತ ನೀನಯ್ಯ.
ಸೊದೆಗೆಂದು ಸಾಗರವ ಮಥಿಸಿದರೆ ಘೋರವಿಷ
ದೊರೆತಂತದಾಗಬಾರದು ಮಗುವೆ. ಬಿಚ್ಚಿಬಿಡು
ವಾಜಿಯನು. ಅಯ್ಯನೊಡನೇತಕ್ಕೆ ಮಾರ್ಮಲೆವೆ?
ನೀತಿಯರಿತವನು ನೀನಲ್ತೆ ಮಗು! ಪಿತೃಕಾರ್ಯ
ವಳಿಸುವದು ತರವೇನು ಕಂದಯ್ಯ! ನನ್ನವರು.
ಬಂದಿಹರು ನನ್ನ....(ಕಣ್ಣೀರು)

**ಬಭ್ರುವಾಹನ** [ಪಶ್ಚಾತ್ತಾಪದಿಂದ. ತಾಯಿಯ ಕಣ್ಣೀರನ್ನು ಒರೆಸುತ್ತ]—
ಕ್ಷಮಿಸುವದು ತಾಯಮ್ಮ, ತಿಳಿವಿಲ್ಲ
ದೆಸಗಿರುವ ಕಜ್ಜದಲಿ ತಿಳಿವಾಗಲುಳಿಯುವದೆ
ವೈಮರವು? ನಿಮ್ಮಡಿಗೆ ಸಂಪ್ರೀತಿಯಾಗುವಂ
ತೆಸಗುವದೆ ನನ್ನಪಣ. ಮಿಂಚಿರುವ ಮಾತೇಕೆ?

**ಚಿತ್ರಾಂಗದೆ** (ಮಗನ ಮುಂಗುರುಳುಗಳನ್ನು ನೇವರಿಸುತ್ತ. ಕಣ್ಣೀರ ಕೊಡವಿ)—
ಧರ್ಮವಂತನು ನೀನು ಕಂದಯ್ಯ! ಈಸುದಿನ
ಪರಿಯಂತ ನನ್ನವನ ಅಗಲಿಕೆಗೆ ಬಸವಳಿದು
ಬಾಳುತಿರಲಿಂದವನೆ ಬಂದಿಹನು. ನನ್ನ ಭಾ
ಗ್ಯದಕಾಲ, ನಿನ್ನ ನೆರವಿಗೆಮೂಲ. ಹೊರಡೇಳು
ಕಂದಯ್ಯ! ನಿನ್ನ ಸರ್ವಸ್ವವನು ತಾತನಡಿ
ದಾವರೆಗೆ ಕಪ್ಪನಿಡು. ಎನ್ನೆದೆಯ ಸಂತಾಪ
ಶಾಂತಿಯಾಗಲಿ ಕಂದ! ಜೇಗನೇಳೈ ಮಗುವೆ!

**ಬಭ್ರುವಾಹನ**—ಏತಕಾತುರ ತಾಯಿ! ಇನ್ನೆರೆಡುಗಳಿಗೆಯಲಿ
ಮಣಿಪುರದ ರತ್ನಪೀಠದ ಮೇಲೆ ತಾತನನು

ಕುಳ್ಳಿರಿಸಿ ಧನ್ಯತಮನಾಗುವೆನು. ನೀನಾಗ
ನಿನ್ನೊಲವಿನಭಿಷೇಕವೆರದವನ ಸಂತೈಸು.
ಮಣಿಪುರದ ಭಾಗ್ಯಕೆಣೆಯಿನ್ನುಮೇಲುಂಟೆ ತಾಯಿ ?

ಚಿತ್ರಾಂಗದೆ [ ಹರ್ಷರೋಮಾಂಚಿತಳಾಗಿ ]—
ಮಣಿಪುರದ ಮಣಿಸರದಿ ರನ್ನ ಕೋದಂತಾಯ್ತು.
ಪಿತಸುತರು ಕೂಡಿದರೆ ಸೋದೆಯುಂಬ ಸುರರನೂ
ಗೆಲಬಹುದು ಬೇಗೇಳು ಮುದ್ದುಸುತ. ಕೇಳಲ್ಲಿ !
ವಾದ್ಯಗಳು ಮೊಳಗುತಿವೆ.

ಬಭ್ರುವಾಹನ [ ಆನಂದದಿಂದ ]— ಸುಮಂಗಳ ದನಿಗಳವು.
ನೋಡಲ್ಲಿ ನೇಸರನು ಪಶ್ಚಿಮಾದ್ರಿಯನೇರಿ
ನಮಗೆಲ್ಲ ಸಂತಸವ ಬೀರುವನು. ಅಪ್ಪಣೆಯ
ನೀಡುವುದು ತಾಯಮ್ಮ ! ಇನ್ನೆರಡು ಗಳಿಗೆಯಲಿ
ತಾತನನು ಕರೆತರುವೆ. ( ನಮಿಸುವನು )

ಚಿತ್ರಾಂಗದೆ ( ರೋಮಾಂಚಿತಳಾಗಿ )— ಹೋಗಿಬಾ ಕಂದಯ್ಯ !
ನನ್ನೆದೆಯ ಕಟ್ಟೆರಕ ಹೊಯ್ಯುವೆನು ನಿನಗಿಂದು
ಸಫಲವಾಗಲಿ ಕಂದ ! ನನ್ನೊಲುಮೆ ನಿನ್ನೊಲವು.

( ಬಭ್ರುವಾಹನನು ಹೋಗುವನು )

ಏಕೆನ್ನ ಮನವಿಂತು ಸಂತಸದಿ ಕುಣಿಯುತಿದೆ !
ನಲ್ಗಡಲ ತೆರೆಯು ಮೇಲ್ತೇಲುತಿದೆ. ಸುಮ್ಮನಿರು
ಹೃದಯವೇ ! ನಲ್ಲನೈತರುತಿಹನು. ಏಕಿಂತು
ಹಾರೈಸಿ ಹಾರತೊಡಗಿಹೆ ನೀನು. ಇನ್ನೆರಡು
ಗಳಿಗೆಯಲಿ ನನ್ನವನು ನನ್ನೆಡೆಗೆ.

( ವೀರಭಟರು ಜಯಜಯಕಾರ ಮಾಡುತ್ತಿರಲು ಅವರನ್ನೆಲ್ಲ ಮುಗುಳುನಗೆಯಿಂದ ನೋಡಿ ತೆರಳುವಳು. )

ತೆರೆ

---

## ದೃಶ್ಯ ೩

**ಚಿತ್ರಾಂಗದೆ—**

ನನ್ನೆದೆಯ ಮುರಳಿನಲಿ ಸೆಲೆಯೊಡೆಯಿತೀದಿನವು.
ಪ್ರೇಮನದಿ ಹರಿಯುತಿದೆ, ಎದೆಯೆಲರು ಬಿರಿಯುತಿದೆ
ನೇಸರನ ಪ್ರೇಮರುಚಿ ಸೋಂಕುತಲೆ ಬಿರಿಯುತಿಹ
ಮುಗುಳಂತೆ, ನನ್ನೆದೆಯ ನೀರಜವು ಪಾಂಡವರ
ಕುಲನಭದ ರವಿಪಾರ್ಥನೆನ್ನೆಡೆಗೆ ಸಾಗುತಿರೆ
ಅರಳುವದು. ನನ್ನೆದೆಯ ಸಂತಸವ ತೋರುವಳೊ
ಎಂಬಂತೆ ಸಂಜೆವೆಣ್ಣೆನಿತು ಮೋಹಿಸುತಿಹಳು !
ಹಕ್ಕಿಗಳ ರವವೆನಿತು ಚೆಲುವಾಗಿರುವದು ! ಆ
ಗಿಳಿವೆಣ್ಣುಗಂಡುಗಳ ಪ್ರಣಯಪರಿಶುದ್ಧತೆಯು
ಬೆಡಗೆನಿತು ಮೋಹಕವು ! ಇಂದೆನ್ನ ಮನವಕ್ಕಿ
ಯಾವುದೋ ಭಾಗ್ಯದಿಂದೊಲವಿನಲಿ ಕುಣಿಯುತಿದೆ.
ಎದೆಯೊಲವು ತುಂಬಿಬರೆ ಪ್ರೇಮವಾಹಿನಿಯೆಲ್ಲ
ದೇಹದಲಿ ಹರಿಯುವದು. ಒಳದೋಟ ಬೆಳಗುವದು.
ಹೇ ದೇವಿ ! ಕುಲಮಾತೆ ! ಶತಕೋಟಿಸಲ ನಿನ್ನ
ನಮಿಸುವೆನು, ನಲ್ಲನೈತರಲಮ್ಮ !

**ಕಪಿಲೆ** ( ಅರೆನೋಟದಲ್ಲಿ )— ಏಕಿನಿತು

ಚಂಚಲತೆ ನೆಲೆಸಿಹುದು ಹೇಳಮ್ಮ ಮಾತಾಯಿ !
ನಿನ್ನಮನವೀ ದಿನವು ಕಾತರತೆಗಳವಟ್ಟು
ಆಗಸದಿ ಹಾರುತಿದೆ. ಹಣೆಯಮೇಲ್ಸಾಲಿಟ್ಟ
ಬಿಂದುಗಳು, ಹವಳಸರವಾಗೆನಿತು ಶೋಭಿಪವು !
ತೊಳಗುತಿಹ ಹಾಲ್ಗಲ್ಲ ಕೆಂಪೇರಿ, ಸುಮಶರನ
ಬತ್ತಳಿಕೆಯಿಂಸಿಡಿಡು ಸಿಕ್ಕಿದೊಲು ತೋರುತಿದೆ.......

**ಚಿತ್ರಾಂಗದೆ** ( ಮಾತನಾಡಗೊಡದೆ )—
ಬಣ್ಣನೆಯು ಸಾಕಮ್ಮ ; ಸುಮ್ಮನಿರು ಪ್ರಿಯಸಖಿ.
ಪ್ರಣಯವೇದನೆಯೆನ್ನ ಪೀಡಿಸುತ, ಸುಡುತಲಿಹು
ದೆನ್ನೆದೆಯು. ಸುತಮೋಹ ಹಿರಿದಾಗಿ ಬರಲಮ್ಮ
ಬರಲವರು. ಬರದೇನು? ನನ್ನ ಕಂಗಳ ಪುಣ್ಯ !
ನನ್ನ ಪ್ರೇಮದ ಫಲವು ! ನನ್ನೆದೆಯ ಕಟ್ಟಿರಕ
ಸಫಲವಾಗುವದಿಂದು. ಕ್ಷತ್ರಧರ್ಮವನರಿತು
ಮಗನೆಂತು ವಿನಯದಲಿ ತಲೆವಾಗಿ ತೆರಳಿದನು.
ಕಂದಯ್ಯ ! ನನ್ನೊಲುಮೆ ಬೆಸೆಯುಳ್ಳೆ ನೀನಿಂದು
ಹೋಗಿರಲು ಬರದೇನು ಹಿಂದುಳಿಯುವನೆ ದೊರೆಯು ?

**ಕಪಿಲೆ**— ಬರದೇನು ದೇವಿಯರೆ ? ಸುತಮೋಹವೆಳೆದವರ
ಮಣಿಪುರವ ಹೊಗಿಸುವದು. ಇನ್ನೆರಡು ಗಳಿಗೆಯಲಿ
ನಿನ್ನವನು ನಿನ್ನಡೆಗೆ.

**ಚಿತ್ರಾಂಗದೆ** ( ಉಬ್ಬಿ ) ಉಡುಗರೆಯು ನಿನಗಮ್ಮ !
ಅಚ್ಚುಮೆಚ್ಚಿನ ಮೆಚ್ಚನೀಯುವೆನು ಪ್ರಿಯಸಖಿ !
ಎರಡು ಗಳಿಗೆಯ ಕಾಲ ಕಳೆಯುವದೆ ಕಷ್ಟವಿದೆ.
ರವಿಯೆನಿತು ಸೋಮಾರಿಯಾಗಿರುವನೀದಿನವು !
ಸಾಗು ಸಾಗೆಲೆ ಸೂರ್ಯ ! ಚಣಕಾಲವಾದರೂ
ಭರದಿಂದ ಹೊಂದೇರ ನೂಕುತಿರು. ವಿಶ್ವನಿಯು
ಮದಗತಿಗೆ ಹೊರತಾಗಲೀದಿನವು. ಜಗಜೆಳಕೆ !
ಹದಿಬದೆಯ ಎದೆಯಾಳವರಿಯೆಯಾ ನೀನಿಂದು.
( ವಿರಹವ್ಯಥೆಯಿಂದ ) ನನ್ನೊಲವೆ! ನನ್ನೆದೆಯೆ! ನನ್ನಪ್ರೇಮದಅರಸೆ!
ಬೇಗಬಾರೆನ್ನೊಡೆಯ. ವಿರಹಾಗ್ನಿ ವೇದನೆಯ
ಉತ್ಕಟತೆ ಸೈರಣೆಯ ಸೀಮೆಯನು ಮೀರಿಹುದು.
ತಾಳಲಾರೆನು ದೊರೆಯೆ. ಈಸುದಿನ ಬಯಸಿದುದು
ನೆರವೇರಲೀದಿನವು. ಸವಿಗನಸ ಸವಿಯುತ್ತ
ಭರವಸೆಗೆ ಸೆರೆಯಾಗಿ ಎನಿತೆನಿತೊ ಕಾಲವನು

ನೂಕಿದೆನು. ಚಣವಿನ್ನು ಕಳೆಯುವದು ಯುಗವೆನಗೆ.
( ಕೈಜೋಡಿಸಿ ) ಹೇ ದೇವಿ! ಕುಲಮಾತೆ! ಹೆಣ್ಣುದೇವತೆಗಳಿರ!
ನಲ್ಲನಗಲಿದ ನೋವ, ಹೆಣ್ಣೊಡಲ ತಾಪವನು
ಹೆಣ್ಣಿರುವ ನಿಮಗೆಂತು ಬಣ್ಣಿಸಲು ಎಡೆಮಾಳ್ಪೆ?
ನಿಮ್ಮ ತೇಜದ ಬೆಳಕು ನಲ್ಲನನು ತೊಳಗಿಸಲಿ!
ಆ ಬೆಳಕು ನನ್ನೆದೆಯ ದೀಪವನು ಬೆಳಗಿಸಲಿ!
ಕುಡಿವೆಳೆದು ಬಾಳುತಿಹ ನನ್ನೆದೆಯ ಕೈದೀಪ
ನನ್ನವನ ತೇಜದಿಂ ಜಗ್ಗಝುಗ್ಗನೆಯುರಿದು
ಒಳಗೆನ್ನ ದೇಹದಲಿ ಬೆಳಕಿಳಿದು ಬಾಳಲಾ!
ಮಣಿಪುರದ ಮಾದೇವಿ! ನನ್ನೊಡತಿ ನೀನಮ್ಮ!
  ನನ್ನರಿವು ನಿನಗಮ್ಮ!

ತೆರೆ

## ದೃಶ್ಯ ೪

( ಅರ್ಜುನನು ಪಾಳೆಯದ ಓಲಗದಲ್ಲಿ ವಿರಾಜಮಾನನಾಗಿದ್ದಾನೆ. ಬಭ್ರುವಾಹನನು ಕಪ್ಪ-ಕಾಣಿಕೆಗಳೊಂದಿಗೆ ಮುಂದೆ ನಿಂತಿದ್ದಾನೆ. )

**ಅರ್ಜುನ** [ ದರ್ಪಯುಕ್ತ ದನಿಯಲ್ಲಿ ]— ನೀನಾರು ವೀರಮಣಿ !
ಏತಕಿಲ್ಲಿಗೈತಂದೆ ?

**ಬಭ್ರುವಾಹನ** ( ವಿನಯದಿಂದ, ತಲೆಬಾಗಿ )— ದಯದೋರು ತಂದೆಯೇ !
ನಿನ್ನಣುಗ ಬಭ್ರು ನಾ.

**ಅರ್ಜುನ** [ ಆಶ್ಚರ್ಯದಿಂದ ]— ನೀನೆನ್ನ ಮಗ! ನಾ
ನರಿಯದಿಹ ನನ್ನ ಮಗ !

**ಬಭ್ರುವಾಹನ** — ನೀವರಿತು ಮರೆತಿರುವ
ನಿನ್ನಣುಗ ನಾನಹುದು. ( ವಿನಯದಿಂದ ಮತ್ತೆ ಬಾಗುವನು )

**ಅರ್ಜುನ** ( ತನ್ನಲ್ಲಿ )— ಇವನ ಮೊಗ ನೋಡಿದೊಡ
ನಾರದೋ ಹೋಲಿಕೆಯು ನೆನಪಾಗುತಿದೆ.
ನನ್ನ ಮನವೇಕೊ ಕರಗುತಿದೆ! (ಹೊರಗೆ) ಪಾರ್ಥನಿಗೆ ವಿಸ್ಮೃತಿಯು
ಸುಳಿವಿಲ್ಲ ಭೂಪಾಲ! ನೀನಾರೊ ನಾನರಿಯೆ.

( ಓಲಗದ ಒಂದು ಮೂಲೆಯು ಗುಂಪಿನಲ್ಲಿ ಗುಜಗುಟ್ಟುವದು ಕೇಳುವದು. )

**ಬಭ್ರುವಾಹನ** ( ಆತುರದಿಂದ )— ತಾತ ಚಿತ್ತೈಸುವದು. ಎನಗೊಡಲ ನಿತ್ತವಳು
ನಿನ್ನ ಸತಿ ಚಿತ್ರಾಂಗಿ. ಸಲಹಿದವಳುಲೂಪಿಯಳು
ತೀರ್ಥಯಾತ್ರೆಗೆ ಬಂದ ನಿನಗಾದರರಸಿಯರು
ತನುಜಾತನಾದೆನಾಂ ! ( ಅರ್ಜುನನ ಉತ್ತರ ನಿರೀಕ್ಷಿಸುವ ನೋಟ)

**ಅರ್ಜುನ** ( ಏನೋ ನೆನಪಾದಂತಾಗಿ ತನ್ನಲ್ಲಿ )— ಅವಳ ಹೋಲಿಕೆಯನಿರ
ವದ್ಯರೂಪೀತನದು ! ( ಹೊರಗೆ ) ಈಗ ಬಂದಿಹುದೇನು
ಕಾಣಿಕೆಯು ಕತೆಯೇನು ?

**ಬಭ್ರುವಾಹನ** ( ಮಗುವಿನಂತೆ )— ತಪ್ಪ ಮನ್ನಿಸು ತಾತ !
ಸಂಬಂಧವರಿಯದಲೆ ಜನ್ನಹಯ ಕಟ್ಟಿದೆನು.

ಬಾಲಕನು ದುಡುಕಿದೆನು. ನನ್ನ ಹಿರಿಯನು ನೀನು
ಮರೆತೊಮ್ಮೆ ದಯದೋರು. ಮನೆಯಲ್ಲಿ ತಾಯಮ್ಮ
ನಿಮಗಾಗಿ ಕಾದಿಹಳು. ಮಣಿಪುರದ ದೊರೆಯಾಗಿ
ಬಾರಯ್ಯ ತಾತಯ್ಯ !

(ಓಲಗದಲ್ಲಿ ಎಲ್ಲರೂ ಒಬ್ಬರ ಮುಖವನ್ನೊಬ್ಬರು ನೋಡುವರು. ಅರ್ಜುನನು ಇವರನ್ನೀಕ್ಷಿಸಲು ಎಲ್ಲರೂ ಒಮ್ಮೆಲೇ ಖೊಳ್ಳೆಂದು ನಗುವರು. ಬಭ್ರುವಾಹನನು ವಿಲಕ್ಷಣ ಮನೋವೇಗವನ್ನು ಹತ್ತಿಕ್ಕುವನು. ಎಲ್ಲರೂ ಅರ್ಜುನನ ಉತ್ತರದ ಹಾದೀ ನೋಡುವಂತೆ ಮೌನವಾಗುವರು. )

ಅರ್ಜುನ ( ರೋಷಪೂರಿತ ದನಿಯಲ್ಲಿ )— ಅರ್ಥವಾಯಿತು ನನಗೆ.
ಸಾವಿದಿರು ಬಂದಿರಲು, ಜೀವಗಳ್ಳನ ತೆರೆದಿ
ಜೀವ ಬಿಕ್ಕೆಯಕೊಂಬ ಹೇಡಿತನದರಿವಾಯ್ತು.
ಕುಲಗೇಡಿಯಾದವನು ಅರ್ಜುನನ ಮಗನಿಹನೆ ?

ಬಭ್ರುವಾಹನ ( ಉದ್ವೇಗವನ್ನು ಹತ್ತಿಕ್ಕಿ ವಿನಯದಿಂದ )—
ಕುಲಗೇಡಿ ನಾನಲ್ಲ ದಯದೋರು ಎನ್ನೊಡೆಯ !
ಜೀವಗಳ್ಳನ ತೆರದಿ ಬಾಳುವವ ನಾನಲ್ಲ.
ಮರಣವೆಂಬುದು ನಮಗೆ ಸಾಜನಾತಾಗಿಹುದು
ತಾಯ್ಮ ನವನಳುಕಿಸದೆ ಕರೆಯಬಂದಿಹೆ ದೊರೆಯೆ !
ಸತಿಮೋಹ, ಸುತಮೋಹ............

ಅರ್ಜುನ (ತಡೆದು )— ಸತಿಯಾರು ? ಸುತನಾರು ?
'ಜಂಬುಕವು ಜನಿಸುವದೆ ಸಿಂಗದುದರದೊಳಕಟ' !
ಹೆಂಬೇಡಿ ನೀನೆಲವೊ ? ಕುಲಗೇಡಿ ! ನನ್ನ ಬಸಿ
ರಲಿ ಬಂದವನೆ ಖೂಳ ! ಕುದುರೆಯನು ಕಾದದೇ
ತಕೆ ತಂದೆ ? ರಣಹೇಡಿ ! ದೂರಸರಿ; ನಿಲ್ಲದಿರು
ನನ್ನೆದುರು.

ಬಭ್ರುವಾಹನ ( ಸಮಾಧಾನದಿಂದ )— ಬಾಗುವೆನು ನನ್ನಯ್ಯ ! ರಣಹೇಡಿ
ನಾನಲ್ಲ. ಶರಣೆಂದು ಬರಲಿಲ್ಲ. ನನ್ನಮ್ಮ
ನಿಮಗಾಗಿ ಕಾದಿಹಳು ಮನೆಯಲ್ಲಿ. ಅದಕಾಗಿ

ಬಂದಿಹೆನು ನಿಮ್ಮ ಕರತರಲೆಂದು. ಎಲೆ ದೊರೆಯೆ!
ನನ್ನ ಕುಲಪಂತವನು ಮರೆತವನು ನಾನಲ್ಲ.

ಅರ್ಜುನ [ ಕಪ್ಪಕಾಣಿಕೆಗಳನ್ನು ಒದೆಯುವ ಭರದಲ್ಲಿ ಬಭ್ರುವಾಹನನನ್ನೂ ಒದೆಯುವನು. ಬಭ್ರುವಾಹನನು ಪೆಟ್ಟಿನ ಹೊಡೆತಕ್ಕೆ ಕೆಳಕ್ಕೆ ಬಿದ್ದಾಗ ]

ನಿನ್ನ ಕುಲದಭಿಮಾನ! ವೈಶ್ಯಕುಲದಭಿಮಾನ
ವಿರಬಹುದು ನಿನ್ನಲ್ಲಿ. ಯಾವಳೋ ವೈಶ್ಯಳಿಂ
ದುದ್ಭವಿಸಿ ಕ್ಷತ್ರಿಯರ ವೇಷದಲಿ ಮೆರೆಯುತಿಹ
ನಿನಗೆಲ್ಲಿ ಪಂತಗಳು? ದೂರಸರಿ ಮುಟ್ಟದಿರು
ಕ್ಷತ್ರಿಯರ ಪಾದಗಳ. ( ಮತ್ತೆ ಒದೆಯುವನು )

( ಸಭಾಸ್ಥಾನದಲ್ಲಿ ವಿಲಕ್ಷಣ ಗೊಂದಲ. ಕಳಕಳಿಸಿ ನಗುವ ದನಿಯೇ ಎಲ್ಲಕಡೆಗೆ. ಬಭ್ರುವಾಹನನು ಸಾವಕಾಶವಾಗಿ ಮೇಲೇಳುತ್ತ ಒಮ್ಮೆಲೆ ಸಿಂಹಾಸನದ ಎದುರು ಎದೆ ಸೆಟೆಸಿ ನಿಂತು, ರೊಚ್ಚಿನಿಂದ )

ಬಭ್ರುವಾಹನ— ನಾಲಿಗೆಯು ಕಳಚೀತು

ಎಚ್ಚರಿಕೆ! ಸುಮ್ಮನಿರು. ಅಯ್ಯ ನೀನೆನಗೆಂದು
ಮಗುಳೆ ಮಗುಳಡಿಗೆರಗಿ ಬೇಡಿದೊಡೆ ವಿಷದ ನುಡಿ!
ನನ್ನೆದುರು ಹಳಿದೆಲಾ ಮಾತೆಯನು. ನನಗೆ ನೀ
ನರಿಸಿದೆಯೊ! ಅರಿಯಬಹುದಿನ್ನು ಕೇಳ್ನಿನ್ನ ತಲೆ
ಗೆಡಹದೊಡೆ ನೀನಾಡಿದಿನಿತೆಲ್ಲವದು ದಿಟವು!

( ಸಭಾಸಸ್ಥಾನದಲ್ಲಿ ಮತ್ತೆ ನಗು. ಬಭ್ರುವಾಹನನು ಎಲ್ಲರನ್ನೂ ಒಮ್ಮೆಕೆಕ್ಕರಿಸಿ ನೋಡುವನು. ಅರ್ಜುನನೂ ಅಸಹ್ಯವಾಗಿ ನಕ್ಕು, ನಗೆಯಲ್ಲಿ ವ್ಯಂಗವನ್ನು ಬೆರಸಿ)

ಅರ್ಜುನ— ದಿಟವೆಂದೆ ಹೇಳಿಹೆನು ನಿನ್ನದಟನರಿತಾನು.
ವೈಶ್ಯನಿಂದುದಯಿಸಿದ ಸಾಹಸಿಯು ನೀನಹುದು.
ಯಾರಲ್ಲಿ? ಪಾಳೆಯದ ಹೊರಗಡೆಗೆ ಅಟ್ಟಬಿಡಿ
ರೀತನನು

( ಕೆಲವು ದಂಡಾಳುಗಳು ಧುಮ್ಮಿಕ್ಕುವರು. ಬಭ್ರುವಾಹನನು ಸರ‍್ರನೇ ಖಡ್ಗವನ್ನು ಹಿರಿದು )

ಬಭ್ರುವಾಹನ—ಎಚ್ಚರಿಕೆ ! ಮುಟ್ಟುವವ ಮಡಿಯುವನು.
ಕಾಳಗದ ಕಣದಲ್ಲಿ, ನೆತ್ತರೋಕುಳಿಯಾಡಿ
ಈ ಸೇಡನಾರಿಸುವೆನೆಚ್ಚರೆಚ್ಚರ ಪಾರ್ಥ !
ನೋಡಿಲ್ಲಿ ! ಈಯೊರೆಯು ಹೊರಗಿರುವ ಖಡ್ಗವೇ
ನಿನ್ನೊಡಲ ಸೀಳುವದು ! ನಿನ್ನವರಸಿರಿಯುವದು.

(ಖಡ್ಗವನ್ನು ಝಳಪಿಸಿ ಮಿಂಚಿನಂತೆ ಹೋಗಿಬಿಡುವನು. ಅರ್ಜುನನು ಅವನು ಹೋದ ನಿಟ್ಟನ್ನೆ ನೋಡುತ್ತಿರುವಾಗ)

ತೆರೆ

---

## ದೃಶ್ಯ ೫

[ಅಪಮಾನಿತನಾದ ಬಭ್ರುವಾಹನನು ಕಣ್ಣುಗಳಿಂದ ಕಿಡಿಗಳನ್ನುದುರಿಸುತ್ತಿರುವನೋ ಎಂಬಂತೆ ನಿಂತಿದ್ದಾನೆ. ಒರೆಯಿಂದ ಹೊರಬಿದ್ದ ಖಡ್ಗವು ಕೈಯಲ್ಲಿ ಮಿಂಚಿನಂತೆ ಹೊಳೆಯುತ್ತದೆ. ಅನೇಕ ಭಾವನೆಗಳ ತಾಕಲಾಟದ ಮುಖವು]

ಬಭ್ರುವಾಹನ— ತಾಯ ಮಾತನು ಕೇಳಿ. ಅವಳಮನ ನೋಯಿಸದೆ
ಪಿತನಿವನು, ಮಾರ್ಮಲೆಯಬಾರದಿವನೊಡನೆಂದು
ಇಲ್ಲಿಗೈತಂದಿದೇನೀಯನರ್ಥವು ! ಅಕಟ !
ನಾನಂತೆ ವೈಶ್ಯಸಂಭವನೀಗ ನೀಚ ಜಾತಿಯೊ
ಳುದ್ಭವನು ! ಜಂಬುಕನು ನಾನಂತೆ ! ಕೇಸರಿಯೊ
ತಾನಂತೆ ! ಮೂಲೋಕಪತಿಯಂತೆ ಮತ್ತನಿವ !
ಸೈರಣೆಯ ಸೀಮೆಯನು ದಾಟುತಿದೆ ಮನವೆನ್ನ
ಪಾರ್ಥ ನೆತ್ತರವನ್ನು ಬಯಸುತಿದೆ ಕೈಗೋಲು !
(ಅವಡುಗಚ್ಚಿ) ತೋಳಬಲ ಕೀಟದಲಿ ಮೈಮರೆತ ರಕ್ಕಸನು
ತನ್ನಳಿದ ಪಾರ್ಥಿವರ ಲೆಕ್ಕಿಸದ ಮೂಢನಿವ !
ವಾಸುದೇವನ ಸಖನು ! ಕನಸಲ್ತೆ ಈ ಮಾತು !
ಕರುಣಾಳು ಬಲ್ಲಹನ ಗೆಳೆತನದಿ ಮೆರೆಯುವವ
ಕರ್ಕಶನು ತಾನಿಹನೆ ? ರಕ್ಕಸನು ಇಹನೇನು ?
(ಖಡ್ಗವನ್ನು ಮೇಗೆತ್ತಿ) ಋಷಿಗಳಿರ ! ಹಿರಿಯಮುತ್ತಾತರಿರ !
ಆಗಸವೆ !

ಪಾರ್ಥನೆನ್ನನು ಹಳಿದುದಕ್ಕೆ ನೀವೇ ಸಾಕ್ಷಿ.......
ಎನ್ನನುಭವವೆ ಸಾಕ್ಷಿ, ಮೇಣವನ ಬಿಂಕತನ,
ನೀಚತನ, ಕುಹಕತನ, ಉನ್ಮತ್ತತೆಯೆ ಸಾಕ್ಷಿ.
ಮಾತಾಯಿ ಸೃಷ್ಟಿಯೇ ! ಮಣಿಪುರದ ಲಕ್ಷ್ಮಿಯೇ !
ರಣದೇವಿಗಾಹುತಿಯ ನೀಡುವೆನು ಪಾರ್ಥನನು !
ಅಲ್ಲದೊಡೆ ಎನ್ನೊಡಲನೀಡಾಡಿ ಮಡಿಯುವೆನು.

ಅನಮಾನದಾವಾಗ್ನಿ ದಹಿಸುತಿದೆ, ಸೀಯುತಿಹು
ದೆನ್ನೊಡಲ! ಅರ್ಜುನನ ಗಂಟಲವು ಸೀಳಿರಲು,
ನೆತ್ತರವು ಪುಟಿಯುತಿರೆ, ಸವಿಯುವೆನು ನಾನದಂ!
ಅಮೃತಕಿಂತಲು ಮಿಗಿಲು ಆ ನೆತ್ತರೂಟಂ!
(ತಾಯಿಯನ್ನು ನೆನೆದು) ವಿಧಿಯ ವಿಲಸಿತವೆಂತಹದೊ! ಅಕಟ! ಪ್ರತ್ಯಕ್ಷ
ಮಾತೆಯನು, ಮೇಣವಳ ಮಾಂಗಲ್ಯ ದೊಡೆಯನಂ,
ತನುಜಾತನೆಂಬನಂ ಕಳಚಿ ಕಾಡುವದುಂಟೆ?
ಅವಳ ಮೊಗದಿರವೆನ್ನ ಹೃದಯವನು ಸೀಳುತಿದೆ.
ನಲ್ಲ ಬರುತಿಹನೆಂಬ ಸಂಭ್ರಮದ ಸೊಂಕಿನಲಿ
ಕಳೆದುಂಬಿದಾ ಮೊಗವು ಎನ್ನನಣುಕಿಸುತಿಹುದು;
ಮೇಣೆನ್ನ ಸಾಹಸವ ಸೂರೆಗೊಳುವಂತಿಹುದು;
ಈಗ ಮಾಡುವದೇನು? ಖಡ್ಗವನು ಬಿಸುಡಲಾ?
ಮಾತೆಯನು ನೆನೆಯಲಾ? ಮಾನಭಂಗಿಸಿದವನ
ಪಾದಸೇವನೆಗೆಂದು ಮತ್ತೊಮ್ಮೆ ಹೋಗಲಾ?........
(ವಿಚಾರಮಾಡಿ) ಹೆಣ್ಣಿನಾ ಕಂಬನಿಗೆ ಕಲ್ಲಾಳು ಕ್ಷತ್ರಿಯನು
ಕರಗುವನೆ? ಮಾನವಿರಹಿತನಾತ್ಮವಿರಲೇನು?
ಸುಡುಗಾಡ ಸೇರಲೇಂ? ಕಾಪಾಡು ಹೇತಾಯೆ!
ಕೋಮಲತೆ ಕಮರಿಹುದು ನಿನ್ನಣುಗನೆದೆಯಲ್ಲಿ
ಮಣಿಪುರದ ಮಾನವನು ಕಾಯಲಿಕೆ, ಒಂದುಹನಿ
ನೆತ್ತರಿರುವನಕವೂ ಕಾದಾಡಿ ಮಡಿಯಲಿಕೆ
ನಿನ್ನಣುಗ ಸಿದ್ಧನಿಹ. ಮಾನವಂತನು ನೀನು
ಅರ್ಜುನಾ! ನನ್ನೊಡೆದ ಶೂರ ಧೀರನು ನೀನು!
(ರೊಚ್ಚಿಗೆದ್ದು) ಎಚ್ಚರೆಚ್ಚರ ನಿನಗೆ! ಬಲುಜೋಕೆಯರ್ಜುನಾ
ಅನಿಮಿತ್ತ ಚಿತ್ರೆಯನು ಹಳಿದ ಕಾರಣದಿಂದೆ
ನಿನ್ನ ಕೈಗುಂದುತಿರೆ, ಇರಿವೆನಿದು ಪಂತಂ!
ಇದು ಸಾಹಸವು! ಘೋರಪಣವಿದುವೆ! ಕೊಳಗುಳದ

ಮಧ್ಯದಲಿ, ರುಂಡಗಳ ರಾಶಿಯಲಿ, ರುಧಿರಪ್ರ
ವಾಹದಲಿ ಆಟ್ಟಿಗಳು ತೇಲುತಿರೆ, ಅರ್ಜುನಾ !
ನೋಡುತಿರು ಸಾಹಸವ. ನಿನ್ನ ಕುವರನು ರಣದಿ
ನಿನ್ನವರ ಕೊಲ್ಲುತಿರೆ ಬೆಚ್ಚುತಿರು ಸಾಹಸಕೆ.
ರಣಮತ್ತ ರುದ್ರನಿಗೆ ಅರ್ಜುನನ ಪಾಡೇನು?
ಪಾಂಡವರ ಹಂಗೇನು?

[ ಶಕ್ತಿಯನ್ನು ಝಳಪಿಸುತ್ತ ರಣಭೂಮಿಗಭಿಮುಖನಾಗಿ ಸರ್‍ರನೇ ಹೋಗುವನು ]

ತೆರೆ

## ದೃಶ್ಯ ೬

[ ಚಿತ್ರಾಂಗದೆಯು ಅರಮನೆಯಲ್ಲಿ ಶೋಕಾಕುಲಳಾಗಿ ಕುಳಿತಿದ್ದಾಳೆ. ಬಟ್ಟೆ ಬರೆಗಳೆಲ್ಲ ಅಸ್ತವ್ಯಸ್ತವಾಗಿ ಬಿದ್ದುಬಿಟ್ಟಿವೆ. ದಾಸಿಯರು ಚಿಂತಾಕುಲರಾಗಿ ನಿಂತಿದ್ದಾರೆ. ]

**ಚಿತ್ರಾಂಗದೆ** ( ಬಟ್ಟುಸುರನ್ನೆಳೆದು )— ಜಗದೀಶ ! ಆಗಸದಿ
ಮಿಂಚೊಂದು ಮಿಂಚಿಯಡಗುವತೆರದಿ ನನ್ನೊಲವು
ಫಲಿಸಿತೆನುವಾಗಲೇ ಕಾರ್ಮುಗಿಲು ಮುಸುಕಿತೆಲೆ !
ಕತ್ತಲೆಯೆ ತೋರಿತೆಲೆ ! ನಲ್ಲನಳಿದರೆ ಕೇಡು
ಮಗನು ಮಡಿದಿರೆ ಗೋಳು. ಒರ್ವನಳಿವಿಲ್ಲದಲೆ
ಕಜ್ಜಕೊನೆಗಾಣದಿದು. ಹೇ ದೇವ ! ನಾ ಕಂಡ
ಸವಿಗನಸುಗಳೆನಿತು ಚೆಲುವಾಗಿಹವು ! ಆಶೆ
ಗೆಂತೆನ್ನ ಭರವಸೆಯು ! ಮುಂದರಿವು ತಿಳಿಯದಿಹ
ಮಾನವರ ಕನಸೆನಿತು ಸೊಗಸಾಗಿಹುದು ! ಮನವ
ನೆನಿತು ಸೆರೆಗೈವುದದು. ! ( ಕಣ್ಣೀರನೊರಸುವಳು. )

**ಕಪಿಲೆ**— ಅಮ್ಮನವರಿನ್ನೆನಿತು
ಶೋಕವನುಮಾಳ್ಪುದಿದು. ರೋದನಮರಣ್ಯ ರೋ
ದನವಾಗದಿಹುದೆ ? ಕತ್ತಲೆಯ ಭೇಧಿಸುವ
ಮಣಿದೀಪವರಸುವದೆ ದೇವಿಯರಿಗುಚಿತವಿದೆ.

**ವಿಮಲೆ**— ಕಪಿಲೆ ಹೇಳಿದುದನ್ನು ಕೇಳಿದಿರ ದೇವಿಯರೆ !
ಸಂಧಾನ ಮಾರ್ಗದಲಿ ಬೆಳಕೊಂದು ತೋರುತಿದೆ
ಕಾರ್ಯವಾಗುವದೆಂದು ನನ್ನಬಗೆ ಬಗೆಯುತಿದೆ
ದೇವಿಯರು ತಿಳಿಯುವದು.

**ಚಿತ್ರಾಂಗದೆ** ( ನಿರಾಶೆಯ ದನಿಯಲ್ಲಿ )— ಕಟ್ಟೆಗೊಗ್ಗದ ನೀರು
ಮಳಲಿಂದ ತರುಬಿದರೆ ನಿಲ್ವುದೇ ದಾಸಿಯರೆ ?
ಬಭ್ರುವಾಹನನಂದು ಶರಣಾಗಿ, ಪತಿದೇವ
ನಡಿದಾವರೆಗಳಿಗೆರಗಿದುದನ್ನರಿತಿಹಿರಿ.

ದುರ್ಭಾಗ್ಯವಿಧಿಯೆನ್ನ ಕೆಳೆತನವ ಬಳಸಿಬರ
ಲಾವಕಾರ್ಯವನೆಸಗಿದರೇನು ? ಹಾ ! ವಿಧಿಯೆ !
ಸಾವೆನಿತು ಸೊಗಸಾಗುವದು ಬಾಳಳಿದಮೇಲೆ !
ಪ್ರೇಮರಸವಾಹಿಸಿಯು ಎದೆಯ ಒಳ್ದೋಟದಲಿ
ಹರಿಯುತಿರೆ, ಆ ಝರಿಯು ವಿರಹಾಗ್ನಿ ತಾಪದಿಂ
ದೊಣಗತೊಡಗಿಹುದಿಂದು. ಬತ್ತಿಹೋಗುವದೇನೊ ?
ಹರಣ ಹಾರಿದರೇನು ? ಮರಣವಾದರೆ ಏನು ?

**ಕಪಿಲೆ**— ಮರಣಕೋರುವದೆನಿತು ಸುಲಭವಾಗಿದ್ದೊಡೆಯು
ಪರಿಣಾಮಕೇಡಿನಲಿ ಮುಳುಗುವದು ದೇವಿಯರೆ !
ಹೆಣ್ಣೊಡಲ ಭೇದಿಸಿದ ಕಣ್ಣೀರ ಹನಿಯೊಂದೆ
ಗಂಡುಗಲಿಯಾದವನ ಕಲ್ಮನವ ಕರಗಿಪ್ಪುದು,
ನಿನ್ನವನು ಪ್ರೇಮಮಯಿಹನಮ್ಮ ! ಅದಕಾಗಿ
ನೀವಿಂದು, ಮಗನ ಕಾಯಲಿಕೆಂದು ನಿನ್ನವನ
ಬೇಡಿದೊಡೆ, ಕರುಣಲತೆಯಂಕುರಿಸಬಹುದಮ್ಮ !
ತಾಯ್ಗರುಳ ಕಿವಿಚುವದು ಬೊಮ್ಮನಿಗು ಕಷ್ಟವದು
ಬೊಮ್ಮನಿಗು ಕಷ್ಟವಮ್ಮ !

**ವಿಮಲೆ**— ನಿಜವನುಡಿಯುತಲಿರುವೆ.
ಸಾಹಸವನೆಸಗುವದು ನಮಗೆ ಸಲ್ಲುವ ಮಾತು,
ಫಲವೀವ ಶಕ್ತಿಯದು ದೇವದೇವನ ಕಡೆಗೆ.
ಆಶೆನೀಗಿದ ನರನ ಆಶೆದೊರೆ ಬತ್ತಿರಲು
ಹಸಿಯಿರುವ ನೆಲದಲ್ಲಿ ಪಯವು ದೊರಕೀತೆಂದು
ಒರತೆದೋಡುತಲಿರಲು. ಒಂದು ಹನಿಯುದಿಸಿದರೆ
ಕಾಮಿಜೀವನಕದುವೆ ಸೊದೆಯಿರುವದಲ್ತೆ ?

**ಕಪಿಲೆ**— ಆ ಸೊದೆಯ ಸರಿಸುವದು ಮೂಢತನವಲ್ತೆ ?
ಕೋಟಿಗಲ್ ತಪ್ಪಿದರು ಕಡೆಗಲ್ಲು ತಾಕೀತು.

**ಚಿತ್ರಾಂಗದೆ**— ಕಡೆಗೊಂದು ಕಲ್ಲು.... ! ತೀರಮುಟ್ಟದ ಕಲ್ಲು ! 
ಬಾಳುವೆಯ ಕೊನೆಗಾಲ ದುಕ್ಕದಲಿ ಮುಳುಗುವದು

ಪ್ರತ್ಯಕ್ಷ ತೋರುತಿರೆ, ಮಾನವರ ಹಂಬಲವು
ಚಿಗುರುವದು ನಗೆಗೇಡು. (ಸಿರಾಶೆಯು ದೀರ್ಘನಿಟ್ಟುಸಿರು)

**ಕಪಿಲೆ**— ದುಃಖಾರ್ತೆಯಾಗುವದು ಸರಿಯಲ್ಲ ತಾಯಿಯೇ !
ಏಳುಬೀಳುಗಳೆಲ್ಲ ಮಾದೇವನಾಧೀನ !
ಮಾಳ್ಪಕಜ್ಜವ ತಿಳಿದು ಮನಮುಟ್ಟಿ ಮಾಡುವದು
ಮಾನವರ ಕರ್ತವ್ಯ.

**ಚಿತ್ರಾಂಗದೆ** [ವಿಚಾರಿಸಿ]— ಒಪ್ಪಿದೆನು ಕಪಿಲಮ್ಮ !
ಸೊದೆಯು ಸವಿಯಂತಿಹುದು ನಿನ್ನ ನಲ್ವಾತೆನಗೆ.
( ನಿಶ್ಚಯದ ದನಿಯಲ್ಲಿ ) ಕೊನೆಗಾಲವನಿತರಲಿ ಬಂದರೂ ಕೇಡಿಲ್ಲ
ಗಾಂಡೀವ ತುಡುಕುತಿಹ ರಾಯನನು ಕಾಣುವೆನು.
"ನಾ ನಿನ್ನ ಸತಿ ಚಿತ್ರೆ, ಬಭ್ರುವಾಹನ ಮಗುವು
ಸುತರಕ್ತವೀಂಟುವದು ಕ್ಷತ್ರಿಯಗೆ ತರವಲ್ಲ
ವೆಂ"ದಿನಿತು ಹೇಳುವೆನು. ಮೆಯ್ಯೊಗೆವೆನವನಿದಿರು.
ಕಿವಿಮುಚ್ಚಿಕೇಳಿದೊಡೆ ಸ್ತ್ರೀವಧೆಯ ಪಾತಕಕೆ
ಸನ್ನದ್ಧನಾಗೆನುತೆ ಕೂರಸಿಯ ಅಲಗಿನಿಂ
ದಲ್ಲಿಯೇ ಸಾಯುವೆನು. ಪತಿಸುತರ ಕಾಳಗದ
ಪರಿಸಮಾಪ್ತಿಯ ಪುಣ್ಯದೊರಕುವದೆ ಲಾಭವದು. !
ಗೆದ್ದರೊಂದೆಯೆ ಹಾದಿ ! ಬಿದ್ದರೊಂದೆಯೆ ಮಾತು.
[ ನಿರ್ಧಾರದಿಂದ] ಹೊರಡಿನ್ನು ಕಪಿಲೆಯೇ, ವಿಮಲೆಯೇ
ನಡೆಯೇಳು
ಕತ್ತಲೆಯ ಕಡೆಗಿರುವ ಬೆಳಕು ಕಾಣಲಿಕೆಂದು
ನಾವಿನ್ನು ಹೊರಡೋಣ.

**ಕಪಿಲೆ** ( ಸಂತೋಷದಿಂದ]— ಮೋಡಮುಸುಕಿದರೇನು ?
ಬಾಂದಳದಿ ರವಿಯಿಹುದು ಹುಸಿಯಲ್ಲ ದೇವಿಯೇ.

**ಚಿತ್ರಾಂಗದೆ** [ ಒಮ್ಮೆಲೇ ಬೆಚ್ಚಿಬಿದ್ದು ಮತ್ತೆ ಸಾವರಿಸುತ್ತ ]
ಇದೇನೀಯಪಶಕುನ ! ಉಗ್ರಾಹಿದರ್ಶನವು !
ಚಾಮುಂಡಿ ಕಾಯುವಳು ನಿನ್ನೊಬ್ಬಳಿಹೆಯಮ್ಮ !

ಗರತಿಯರ ತೇಜದಲಿ ಅಪಶಕುನದುರಿಯುನ್ನು
ಆರಿಸುವೆ ನಾನಿಂದು. ಪಾವಿತ್ರ್ಯದಾತ್ಮಕ್ಕೆ
ಶಕುನದುರಿ ಸೋಂಕಿದರೆ ಅಳಕುವದೆ ಆ ಮನವು ?
ಶಕುನಗಳು ಅಳ್ಳೆದೆಯ ಹೇಡಿಗಳನಂಜಿಸುವ
ಮುಳ್ಳುಗಳು ! ಸಿಧ್ಧಾಂತ ಕವಚದಲಿ ಹೆಣ್ಣೊಂದು
ನುಗ್ಗುತಿರಲಾವ ಶಕುನವು ಮಾಳ್ಪುದೇನು ?
ಮುಂದಿಟ್ಟ ಹೆಜ್ಜೆಯದು ಮುಂದೆಯೇ ಸಾಗುವದು.
ಯಮರಾಯ ಬರಲೇನು ? ಬಂದು ನುಂಗಿದರೇನು ?

(ತೆರೆಯಲ್ಲಿ ರಣವಾದ್ಯ)

ಕಪಿಲೆ—. ಬಿರುಸರವು ನುಡಿಯುತಿದೆ ಸಮಯವಾಗಿಹುದಮ್ಮ !
ರಣಭೂಮಿಗೊಯ್ಯುತಿಹ ಪಥವಿತ್ತ ಕಾಣುತಿದೆ
ಹೀಗೆ ಬಾ !........ತಾಯೀ........ಹೀಗೆ ಬಾ !

(ಎಲ್ಲರೂ ರಣಭೂಮಿಯಕಡೆಗೆ ಹೋಗುವರು)

ತೆರೆ

---

## ದೃಶ್ಯ ೭

ರಣಭೂಮಿ: ದಂಡಾಳುಗಳು ಮಾತನಾಡುತ್ತ ಬರುತ್ತಲಿದ್ದಾರೆ.

**ದಂಡಾಳು** ೧—ಘೋರಸಮರವಿದೆನಿತು ! ಹಿಂದೆನಾನತಿ ವಿಷಮ
ಹಲವು ಕಾಳಗಗಳಲಿ ಕಾದಿಹೆನು. ಆದರೀ
ಪರಿಯಬವರವನು ನೋಡಿದುದು ಹೊಸತಣ್ಣ ! ತೀರ
ಹೊಸಹೊಸತು !

**ದಂಡಾಳು** ೨— ಬಭ್ರುವಾಹನನೇನು ದೇವನೋ !
ದೈತ್ಯನೋ ! ಈ ಯುಗದ ಪರಶುವೋ ನಾನರಿಯೆ.

**ದಂಡಾಳು** ೩—ಪೆರತೇನು ! ಅಂತಕನ ಸಾರೂಪ್ಯಮೆನೆ ಕಾಣು
ತಿಹನವನು !

**ದಂಡಾಳು** ೪— ಏನವನ ಬಿಲ್ಗಾರತನವು ! ಕೈ
ಚಳಕತನ ! ಅವನಕಂಗಳತೇಜವೆಮ್ಮೊಡೆಯ
ನಂತಿಹುದು.

**ದಂಡಾಳು** ೩— ಎಮ್ಮೊಡೆಯನಣುಗನೇ ಇರಬಹುದು
ಮತ್ತೇನು !

**ದಂಡಾಳು** ೧— ನಿನ್ನ ಬಗೆಯರಿತದ್ದು ಸಟೆಯಲ್ಲ
ದಿದ್ದರೂ ದಿಟವೆಂದು ಸಾರುವದು ಅರಸನಿಗೆ
ಸೇರದಿದೆ.

**ದಂಡಾಳು** ೩ ಆಳ್ದನಿಗೆ ಬೇಡಾದುದೆಮಗೇಕೆ
ಬೇಕಣ್ಣ ! ನರವೀರನೆಂದುಪೇ ವೇದಾಜ್ಞೆ
ಯಲ್ಲವೇ !

**ದಂಡಾಳು** ೫( ಒಮ್ಮೆಲೆ ಪ್ರವೇಶಿಸಿ )— ಗೆಳೆಯರಿರ ! ನಾನು ಕೇಳುವ ಮಾತು
ದಿಟವೇನು !

**ಎಲ್ಲರೂ** (ಗಾಬರಿಯಿಂದ )—ಯಾವುದದು ! ಯಾವುದದು !! ಮೊಗದಿರವ
ನೋಡಿದರೆ ನೀನೇಕೊ ಭೀತಿಯಲಿ ಬೀಳ್ದಂತೆ
ತೋರುತಿದೆ.

ದಂಡಾಳು ೫— ನಿಜವಣ್ಣಾ ! ನಮ್ಮೊಡೆಯ ಧರಿ
ಮುಕುಟಾಗ್ರದಲ್ಲೊಂದು.......( ನಡುಗುವನು )

ಎಲ್ಲರೂ ( ಒಂದೇದನಿಯಲ್ಲಿ )—ಮುಂದೇನು ! ಮುಂದೇನು !
ಬೇಗನುಡಿ.

ದಂಡಾಳು ೫ ( ಅಂಜಂಜುತ್ತ )—ಹದ್ದು ಕುಳಿತಿತ್ತಂತೆ ! ನನಗೇಕೊ
ಭಯವಣ್ಣ.

ದಂಡಾಳು ೨— ಕಪಟನುಡಿ ! ಹುಚ್ಚುತನ ! ಹದ್ದು
ಳ್ಳಿರಲೇನು ! ಕೇಡಿಲ್ಲಿ ಕೇಳಣ್ಣ ! ಮುರಹರನ
ಸಾರಥ್ಯವಿಲ್ಲದಲೆ ಎಮ್ಮೊಡೆಯ ಜಣಕಾಲ
ವಿಹುದಿಲ್ಲ. ದೇವನಿಹ ಪಾರ್ಥನಿಗೆ ಹದ್ದು ಕು
ಳ್ಳಿರ್ದೊಡೇನಪಯಶವು ? ಹುಚ್ಚನಾಯಕನೀನು.

ದಂಡಾಳು ೫—ಅಪಯಶದ ಮಾತಲ್ಲ ಕೇಳಣ್ಣ ! ಎಂದುಮಾ
ಗದಪಶಕುನಗಳಿಂದು ತೋರುವವು ಅದಕಾನು
ಬೆಚ್ಚಿಹೆನು. ಇದೇನೀ ಕೋಲಾಹಲಂ !
( ತೆರೆಯಲ್ಲಿ ಜಯಧ್ವನಿ, ಕೂಗಾಟ ) ( ಕಿವಿಗೊಟ್ಟು ; ಬಭ್ರುವಾ
ಹನ ದೊರೆಗೆ ಜಯವಾಗಲೆಂದೇನೋ ನುಡಿಯುವರು
ಅಕಟಕಟ ! ಕೇಡೇನೊ ನಮಗೆ ! ........

ದಂಡಾಳು ೧ ( ತಡೆದು )— ಸುಮ್ಮನಿರು
ಹೇಡಿಯೇ ! ಪಾರ್ಥನಿಗೆ ಕೇಡಿಲ್ಲ.
( ತೆರೆಯಲ್ಲಿ ಮತ್ತೆ ) ಬಭ್ರುವಾ
ಹನದೊರೆಗೆ ಜಯವಿರಲಿ ! ಅಣ್ಣರಿರ ! ಕಿವಿಗೊಡಿರಿ !
ಕೆಡೆದನಾ ವೃಷಕೇತು ! ಅಳಿದನಾ ಕರ್ಣಸುತ !

ದಂಡಾಳು ೫—ವೃಷಕೇತು ಕೆಡೆದಂ ! ಪಾರ್ಥಂಗೆ ಬಲಮೋಕು !
ಎಮ್ಮೊಡೆಯನವನಳಿವನೆಂತು ತಾಳುವನಯ್ಯೊ !

ದಂಡಾಳು ೧ ( ಮುಂದೆ ಬಂದು )—ಕಣ್ಣಹನಿ ಕರೆಯುತ್ತ ರಣಹೇಡಿಯಂದದಲಿ
ಕುಳಿತುಕೊಳ್ಳುವ ಸಮಯವಲ್ಲವಿದು ಗೆಳೆಯರಿರ !
ಆಳ್ದನಿಗೆ ಸಿರಗಳನು ದೇಹವನು ಜೀವವನು

ಅರ್ಪಿಸುವಕಾಲವಿದು. ಸ್ವಾಮಿಭಕ್ತಿಯತೋರಿ
ಧನ್ಯವಾಗುವ ಕಾಲ ! ಸಗ್ಗಕೇರುವ ಕಾಲ !
**ದಂಡಾಳು ೨**— ಮೇಣಪನ ಕೆಣಕಿಹನ ನೆತ್ತರೀಂಟುವಕಾಲ !
ಏಳಿರೆಲೆ ! ಗೆಳೆಯರಿರ ! ಅಂತಕನನೇಳಿಸುತ
ಕಾಲವನು ಹಂಗಿಸುತ, ಕೊಳುಗುಳದಿ ಧುಮುಕಿರೆಲೆ !
ಸಾವೊಮ್ಮೆ ಬೀಳೊಮ್ಮೆ !
**ದಂಡಾಳು ೩**( ಬೆಚ್ಚಿಬಿದ್ದು )— ಅರಿವಳು ! ಅಣ್ಣರಿರ!
ಬೇತಾಳಮಾರ್ಗದಿಂದಿತ್ತಲೇ ಬರುತಿಹಳು.
ಭೀಕರದ ರೂಪವಿದು. ರಣದೇವಿಯಹುದೇನು !
ಕೆದರಿರುವ ಕೇಶಗಳು ಕಾಳಾಹಿಯಂತಿಹವು.
ರಣದೇವಿ ! ರಣದೇವಿ! ಹತ್ತಿರಕೆ ಬಂದಳಿದೊ,
( ಎಲ್ಲರೂ ಓಡುವರು )
**ಚಿತ್ರಾಂಗದೆ** ( ಪ್ರವೇಶಿಸಿ )— ದಂಡಾಳೆ ನಿಲ್ಲಿಲ್ಲಿ ! ಭಯಭೀತನಾಗದಿರು.
**ದಂಡಾಳು ೩ ( ಅಂಜಂಜುತ್ತ ಪ್ರವೇಶಿಸಿ. )**
ಯಾರಮ್ಮ ! ಮಾತಾಯಿ ! ಎನ್ನ ಕೂಗಿದುದೇಕೆ ?
**ಚಿತ್ರಾಂಗದೆ**— ಪಿತ-ಸುತರ ಕಾಳಗದ ಕಾರ್ಯಕ್ಷೇತ್ರವದೆಲ್ಲಿ
ನೆರವೇರಿಹುದು ನನಗೆ ಹೇಳುವೆಯ ದಂಡಾಳೆ?
**ದಂಡಾಳು ೩**— ಪಿತನಾರೊ ? ಸುತನಾರೊ ? ನಾನರಿಯೆ ಮಾತಾಯಿ !
ಅರ್ಥವಾಗುವ ತೆರದಿ ಹೇಳಿದೊಡೆ ಅರಿತಷ್ಟು
ವಾರ್ತೆಯನು ಬಚ್ಚಿಡದೆ ಹೇಳುವೆನು.
**ಚಿತ್ರಾಂಗದೆ** — ಬಭ್ರುವಾ
ಹನ ದೊರೆಯ ಬಲ್ಲೆಯಾ ?
**ದಂಡಾಳು ೩** ( ತ್ವೇಷದಿಂದ )— ನಮ್ಮೊಡೆಯನರಿಯನ್ನು
ಆ ಸಿಡಿಲುಮರಿಯನ್ನು ಅರಿಯದವರಾರುಂಟು ?
ಕಿಡಿಗಣ್ಣ ಸಿವನವನು !
**ಚಿತ್ರಾಂಗದೆ**— ಪಾರ್ಥಸುತನವನಣ್ಣ —
ಆ ನಿಮ್ಮ ಕಡುವೈರಿ. ಪಿತನೊಡನೆ ಹಗೆತನವ

ಹೂಡಿ ಕೆಟ್ಟೆ ಹಸನನು. ದಂಡಾಳಿ! ಅತ್ತನಡೆ
ಕೊಂಡೆನ್ನನತ್ತಿಜನದಿ ಹೋಗುವಿಯ! ನನ್ನಯ್ಯ.

ದಂಡಾಳು ೩— (ಅಚ್ಚರಿಯಿಂದ)
ಚಿತ್ರವಿದು! ಈ ಯುಗದ ಮಹಿಮೆಯಸದಳವಮ್ಮ!
ಪಿತನೊಡನೆ ಹಗೆತನವು! ಸಿಂಹವನು ಕೆಣಕಿದೊಡೆ
ಸಾವೇನು ದೂರವೇ? ಬಾರಮ್ಮ ನಾನತ್ತ-
ಲೋಡುತಿಹೆ. ಪಾರ್ಥನಡಿದಾವರೆಗೆ ಮೀಸಲಿಹ
ದೇಹವನು ಇಂದಲ್ಲಿಯೆಡೆಯುಡಲು ಧಾವಿಸುವೆ
ಇದೆಹಾದಿ! ಹೀಗೆ ಬಾ! ತಾಯಮ್ಮ!

ಚಿತ್ರಾಂಗದೆ (ತನ್ನಲ್ಲಿ)—
ಸೇವಕರ
ಬಾಳಿಸಿತು ಸೊಗವಿಹುದು. ಇಂತಹರ ಒಡೆಯನವ
ನೆಂಥ ಪುಣ್ಯಾತ್ಮನೊ? ಧನ್ಯತಮನವನಲ್ತೆ?
(ಹೊರಗೆ) ನಡೆಯಯ್ಯ ದಂಡಾಳಿ! ಬಿಡಿಯೆಂತು ಕಜ್ಜವನು.
ಹೊಸೆದು ಹುರಿಮಾಡಿಹನೊ ನೋಡಲಿಕೆ ಮನವಕ್ಕೆ
ಹಾರುತಿದೆ. ಏನೇನೋ ಕಲ್ಪಿಸುತ ಕುಣಿಯುತಿದೆ.
(ತೆರೆಯಲ್ಲಿ ಜಯನಾದ)— ದಂಡಾಳಿ! ಏಕಿಸಿತು ಜನವೆಲ್ಲ ಆಗಸ
ಬಿರಿವಂತೆ ಕೂಗುತಿದೆ. ಜಯವಾರ್ಗೆ?

ದಂಡಾಳು ೩—
ಕೇಳದಿರು
ಮಾತಾಯಿ! ಎನ್ನೊಡೆಯನಣುಗನವ ಬೀರಬೀ
ರರಬೀರ ಬಭ್ರುವಿನ ಕೂರಸಿಗೆ ಕೂಳಾದ!
ಬೇಗ ಬಾ! ಮಾತಾಯಿ! ಚಣವೊಂದಕಳೆಯುವದು
ದಂಡಾಳುವೆಂಬವಗೆ ಯುಗಗಳನು ಕಳೆದಂತೆ!

ಚಿತ್ರಾಂಗದೆ (ದುಃಖಿತಳಾಗಿ)—
ಹಾ ವಿಧಿಯೆ! ಕಡೆಗೊಮ್ಮೆ ನಿನ್ನ ಬಲ ನಿನ್ನ ಚಲ
ತೋರಿದೆಯ! ವಿಷದುಸಿರ ಬೀಸಿದೆಯ! ಮಾನವರು
ನಿನ್ನಿರವ ಲೆಕ್ಕಿಸದೆ ಭರವಸೆಯ ನೌಕೆಯಲಿ
ನವಿಗನಸ ಚಿತ್ರಿಸುತ, ಸಂತಸದ ಕಡಲ ಮೇ

ಶ್ರೀಲುವರು. ಬಯಕೆಯಲಿ ಸತ್ಯತೆಯ ಕಾಣುವರು.
ಬಯಕೆಬಂಡೆಯನೊಡೆವ ನಿನ್ನ ಶಕ್ತಿಯನೆಚ್ಚ
ಲೆಕ್ಕಿಸರು ! ಹಾ ವಿಧಿಯೆ ! ನಾನಿಲ್ಲಿಗೈತರುವ
ಮುನ್ನೆನಿತುಸಂತಸವು ! ಭರವಸೆಯ ಹಿರಿಗನಸು !
ಈಗಿಲ್ಲಿ ಕಂಡುದೇಂ ? ಕಾರ್ಮುಗಿಲವೊತ್ತವಿದೆ,
ಕತ್ತಲೆಯು ಮುತ್ತುತಿದೆ, ಕೆಡೆದನಾ ವೃಷಕೇತು !
ಕೊಲೆಗೊಂಡನೆನ್ನ ಸುತ ! ಮುಳ್ಳುಗಳು ಹರವಿದವು
ಸಂಧಾನ ಮಾರ್ಗದಲಿ. ಬಿದಿಯೆನಿತು ಘೋರವೋ !
ಚಾಮುಂಡಿ ಕಾಯುವಳು ನೀನೊಬ್ಬಳಿಹೆಯಮ್ಮ !
ಬಂದಳಲ ಲೆಕ್ಕಿಸದೆ ಸಾಗುವೆನು ನಾನಿಂದು,
ಗೆಲವನೀಯೆಲೆ ತಾಯೆ ! ಒಡಲುರಿಯ ತಣಿಸಮ್ಮ !
ದಂಡಾಳೆ ! ಬೇಗನಡೆ ! ರಣಭೂಮಿಗೊಯ್ಯೆನ್ನ.

**ದಂಡಾಳು ೩**— ಹೀಗೆ ಬಾ !-ಮಾತಾಯಿ !-ಹೀಗೆ ಬಾರಮ್ಮ !

( ಇಬ್ಬರೂ ಹೋಗುವರು. ಹೋಗುತ್ತಲೆ )

**ಚಿತ್ರಾಂಗದೆ**— ಹದಿಬದೆಯ ಧರ್ಮವೇ ! ಮಲಗದಿರು ನೀನಿಂದು !
ಹಿಂದೊಮ್ಮೆ ತೋರಿರುವ ನಿನ್ನ ಶಕ್ತಿಯಸೊಬಗ-
ನಿಂದೊಮ್ಮೆ ತೋರಿಸುವ ಕಾಲ ಬಂದಿಹುದೀಗ.
ಸಾವಿತ್ರಿ ! ಸುಮಂಗಲೆಯೆ ! ನಿನ್ನ ಪುಣ್ಯದಬೆಳಕ
ನಿಂದೆನ್ನ ಕಂಗಳಲಿ ಬೆಳಗಿಸೌ ! ಹೇ ತಾಯಿ!
ನಲ್ಲನೊಲುಮೆಯ ಸವಿಯು ಸಕಲರಲಿ ಸರಿಯಮ್ಮ !
ಮಣಿಪುರದ ಲಕ್ಷ್ಮಿಯೇ ! ಎಚ್ಚರದಿ ಕಾಯುತಿರು.
ನಿನ್ನ ಬಲಕವಚವೇ ನನ್ನ ಸಾಹಸಬಲವು.
ಧೈರ್ಯದಲಿ, ಶೌರ್ಯದಲಿ, ಕಾರ್ಯದಲಿ ಎಲೆತಾಯೆ
ನಿನ್ನೊಲ್ಮೆ ಬಲವಿತ್ತು ಎನ್ನ ಕಾಯುವದೆಂದು
ಧುಮುಕುವೆನು. ರಕ್ಷಿಪಳು ನೀನಮ್ಮ !
ಮಾನವನು ಕಾಪಿಡುವ ದೇವತೆಯು ನೀನಮ್ಮ !

( ಕೈಮುಗಿದು ಹೊರಡುವಳು )

---

## ದೃಶ್ಯ ೮

[ ರಣಭೂಮಿ. ಅರ್ಜುನನು ವೃಷಕೇತುವಿನ ಮುಂಡವನ್ನು ಕೈಯಲ್ಲಿ ತೆಗೆದುಕೊಂ ಶೋಕಾಕುಲನಾಗಿದ್ದಾನೆ. ಸುತ್ತಲೂ ಹೆಣಗಳ ರಾಶಿ ಬಿದ್ದಿದೆ. ]

ಅರ್ಜುನ (ಮುಂಡಕ್ಕೆ ಮುತ್ತಿಟ್ಟು) — ಹತಭಾಗ್ಯ ದೈವವೇ! ಸುತಮೋಹವೆನ್ನ
ಅಂಕುರಿಸಿ ಬೆಳೆಯುತಿರೆ. ಚಕ್ರವ್ಯೂಹದಿ ಪೊಕ್ಕು
ಮುದ್ದು ಮಗು ಅಭಿಮನ್ಯು ತನುನೀಗಿ ತೆರಳಿದನು.
ಅಂದೆನ್ನ ಧೈರ್ಯವೇ ಕುಸಿಬೀಳುವಂತಾಯ್ತು.
ಅದರೇಂ? ಮಡಿದವರು ಬಾಳುವುದು ಕೆಲಕಾಲ
ಮಾತ್ರವೇ. ಅವುದೋ ಮೋಹವದು ಮಾನವರ
ಮಾನಸವನಾವರಿಸಿ ಒಂದಳಲನಾರಿಪುದು.
ಅಂತೆಯೇ. ನಾನವನ ಚಿತ್ರವನು ಕರ್ಣಜನ
ಮೊಗದಲ್ಲಿ, ಈ ವೀರರೂಪದಲಿ ಕಾಣುತಿರೆ.
ಎನ್ನೊಡಲ ದುಃಖವನಿತುಂ ಆರುತಾರುತಲಿತ್ತು.
ಅರೆಯಾರಿ ಕಳೆಗೆಟ್ಟ ತನಿಗೆಂಡವೀದಿನವು
ಮಗುಳೆಂದು ಕಳಕಳಿಸಿ ಭುಗಿಲೆಂದು ಎನ್ನೆದೆಯ
ಸೀಳುತಿದೆ. ಅತ್ಯುಗ್ರವಾಗಿರ್ದ ಕ್ಷತ್ರಿಯನ
ಕಲ್ಲೆದೆಯು ಕರ್ಣಜನ ಸಾವಿನಿಂ ಕರಗುತಿದೆ.
ಮೂಲೋಕಪತಿಯವನ ಸಾಹಸವು ಕುಸಿಯುತಿದೆ.
(ಆಶ್ಚರ್ಯದಿಂದ) ಸುಡಲೆನ್ನ ಸಾಹಸವ! ಸುಡುಗಾಡನಾಡಿನಲಿ
ಮರುಳಿರ್ದ ಮಸಣದಲಿ ಮರುದನಿಯ ಗೆಯ್ಯುತಿದೆ
ನಾನೆಳೆದ ಟಂಕಾರ! ಮೂರುಲೋಕದ ಗಂಡ!
ಜವರಾಯನೆಳೆತದಿಂ ಕುವರನನು ಕಾಯದೆಯೆ
ಬಿಂಕದಿಂ ಬಿಗಿಯುತಿಹ ಬಲುಶೂರಧೀರನಿವ!
ಶಿವನಿತ್ತ ಅಸ್ತ್ರಗಳುಂ, ಗಾಂಡೀವ ಬಾಣಗಳು
ತಲೆಮಣ್ಣು ಮುಕ್ಕುತಿವೆ, ಉರುಳುತಿವೆ, ಹೊರಳುತಿವೆ.

(ರುಂಡಕ್ಕೆ ಮತ್ತೆ ಮುದ್ದಿಟ್ಟು) ನೀನೆಂತು ಮಡಿದೆಯೆಯ್ ಕಂದಯ್ಯ!
ನೀನೊಡಲು
ತೆತ್ತುವದು ಸರಿಯಾಯ್ತೆ ಮಾಧವಗೆ! ಅಕಟಕಟ!
ಪಾಂಡವರ ಕುಲಸಿರಿಗೆ ಸಿಡಿಲೆರಗಿದಂತಾಯ್ತು!
(ಕಣ್ಣೀರ ಮಿಡಿದು) ಆಯ್ತಿಂದು! ರಣಯಜ್ಞದಾಹುತಿಯ
ಮೊದಲಾಳು
ನೀನಾದೆ. ಹೆಂಬೇಡಿಯಂತಾನು ಹಿಂದುಳಿದೆ.
ಸೋಲಿಲ್ಲವೆನಗೆಂಬ ಭ್ರಾಂತಿಯಲಿ ಮೈಮರೆತು
ಸಾಗುತಿಹ ನಿನ್ನನ್ನು ತಡವದೆಯೆ ಕೆಟ್ಟೆನೆಲೆ!
ಮೃತ್ಯುವಿನ ದಾಡೆಯಲಿ ನಾನಾಗಿ ಕೊಟ್ಟೆನೆಲೆ!
ಯಾಗದಲಿ ಶೋಭಿಸುವ ತ್ಯಾಗಮೂರ್ತಿಯು ನಿನ್ನ
ಸಾವೆಂತು ಸಹಿಸುವನು? ತಾಯುಮ್ಮ ಕೇಳಿದರೆ.......
[ಮುಂದೆ ವಿಚಾರ ಮಾಡುವ ಧೈರ್ಯಸಾಲದ ಹುಚ್ಚನ ಹಾಗೆ]
ಏಳೇಳು ಕಂದಯ್ಯ! ಕುದುರೆ ಕಾವಲಿಗೇಳು!
ಸೈನಿಕರು ಕಾದಿಹರು, ಆಜ್ಞೆಗಳ ನೀಡೇಳು!
(ಹತಾಶನಾಗಿ) ಏಳಲಾರೆಯ ಮಗುವೆ! ಕೇಳಲಾರೆಯ ಮಗುವೆ!
ಸಿರಿಕೃಷ್ಣವೆಮ್ಮಾತ್ಮ ಕಣ್ಮುಚ್ಚಿ ಕುಳಿತೆಲ್ಲಿ
ಈ ಪಾಡ ನೀಡಿದನೊ? ಹರಿಯೊಲ್ಮೆಯುಡುಗಿಹುದೊ!
ಅಯ್ಯೊ! ಮಗು; ನೀನಳಿದಮೇಲೆಳೆವ ಬಾಳೊಂದು
ಬಾಳೆ ಅದು?
[ರುಂಡದಲ್ಲಿ ಮುಖವನ್ನಿಟ್ಟು ಕಣ್ಣೀರಿಡುತ್ತಿರಲು ಹತ್ತಿರ ದನಿಯೊಂದು ಕೇಳಬರುವದು)
ಆರದನಿ? ಆರದನಿ? (ಕಿವಿಗೊಟ್ಟು) ಹಾಡಲ್ಲ
ಸೊಲ್ಲಮಿದು ಮುರುಳೊಂದು ಕಿರಿಚುತಿಹ ಹದಗೆಟ್ಟ
ಸಂಗೀತ! ಬಾಮುರುಳಿ! ಹಾಡಿಲ್ಲಿ! ನಾನೊಂದು
ಮುರುಳಿಹೆನು. ಕೇಳುವೆನು ನುಡಿಯಿಲ್ಲಿ.

(ಹುಚ್ಚನ ಹಾಗೆ ನಗುತ್ತ ದಿಗ್ಗನೆದ್ದು ಸುತ್ತಲೂ ಹುಚ್ಚು ಹೆಜ್ಜೆಯಲ್ಲಿ ಅಡ್ಡಾಡಿ ಧೊಪ್ಪನೆ ರುಂಡದ ಹತ್ತಿರ ಕುಕ್ಕರಿಸುವನು. ಮತ್ತೆ ಏಳಲು ಸಾಹಸ ಮಾಡುತ್ತಿರುವಾಗ ಮುರುಳೊಂದು ಹಾಡುತ್ತ ಬರುವದು.)

ನೆತ್ತರಿಲ್ಲಿ, ನೆತ್ತರಲ್ಲಿ
ನೆತ್ತರೆಲ್ಲ ಕಡೆಗಿದೆ.
ಎತ್ತ ಹೋದರತ್ತಲದುವೆ
ಮಡುವುಗಟ್ಟಿ ನಿಂತಿದೆ.

( ಮುಖ್ಯ ಮರುಳು ಇಷ್ಟು ಹಾಡಿ ಗರಗರನೆ ತಿರುಗುತ್ತ ಕುಣಿಯುತ್ತಿರುವ
ಉಳಿದ ಮರುಳುಗಳು ಇಷ್ಟು ತಾಳಬದ್ಧವಾಗಿ ಮೊದಲಿನ ಎರಡು ಸಾಲುಗಳನ್ನು ತಾ
ತಿರುಗುತ್ತ ಅನ್ನುವವು. ಮುಖ್ಯ ಮರುಳು ಹಾಡನ್ನು ಮುಂದುವರಿಸಿ ಪ್ರತಿ ಪದ್ಯಕ್ಕೆ ಒಂ
ಕುಣಿಯುತ್ತದೆ. ಉಳಿದ ಮರುಳುಗಳು ಮೊದಲಿನಂತೆಯೇ ಮೊದಲಿನ ಎರಡು ಚರ
ಗಳನ್ನು ಕುಣಿಯುತ್ತ ಹಾಡುತ್ತವೆ. )

ಕೆಡೆದ ಹೆಣಗಳೊಂದು ಕಡೆಗೆ
ಒಣವೆಯಾಗಿ ನಿಂತಿವೆ;
ಅರಿದ ಕಾಲು, ಕೈಗಳಲ್ಲಿ
ರಕ್ತದಲ್ಲಿ ಮುಳುಗಿವೆ. ||
ನೆತ್ತರೂಟ! ನೆತ್ತರೂಟ!
ನೆತ್ತರೂಟವೆಮಗಿದೆ!
ಸತ್ತ ಜನರ ಸುತ್ತಲೆಲ್ಲ
ಸುತ್ತುಗಟ್ಟಿ ನಿಂತಿದೆ. ||
(ವಿಲಕ್ಷಣ ಹಾವಭಾವದೊಂದಿಗೆ)
ಅರಿದ ಆನೆಸೊಂಡಿಲಿಂದ
ಕಾಳೆಯೂದುವೆ;
ಮುರಿದ ಕಾಲಜೋಡಿನಿಂದ
ತಾಳವಿಕ್ಕುವೆ. ||
ಹರಿದ ಕರುಳನಿಭದರದನ
ಪದರ ತಲೆಗೆ ಜೋಡಿಸಿ,
ದಂಡಿಯಿಂದಲುಗುವ ದನಿಗೆ
ಮೆಚ್ಚಿ ತಲೆಯ ತೂಗುವೆ. ||

ರಂಗದಾಟ ಹೆಚ್ಚಲಿಂತು
ಕುಣಿದು ಬೆವರನೊರಸುವೆ
ಭಂಗ ಬರದ ಆಟದಲ್ಲಿ
ತಣಿದು ಮೋದಗೊಳ್ಳುವೆ
ಬಿಸಿಯ ನೆತ್ತರೆಲ್ಲಕಡೆಗೆ
ಜಳಕ ಮಾಡಲು;
ಬಸಿವ ನೆಣದ ತೈಲವೆಮಗೆ
ಎರೆದು ಕೊಳ್ಳಲು

(ದಿಗ್ಗದಿಗ್ಗನೆ ಕುಣಿಯುತ್ತ)

ಮೋದವಿಂದು ! ಮೋದವಿಂದು !
ಮುಗಿವ ಮೋದವಲ್ಲಲೆ !
ಸಾಗುತಿರುವ ಕಾಳಗಕ್ಕೆ
ಸಾವು ಮೂಲವಲ್ಲಲೆ !

(ರಂಗಸ್ಥಳದ ಸುತ್ತಲೂ ಮುಖ್ಯ ಮರುಳನ್ನು ನಡುವೆ ಹಾಕಿ ಉಳಿದ ಮರುಳುಗಳು ಕುಣಿಯುವವು. ಕೇಕೆ ಹಾಕುವವು.)

(ಮುಖ್ಯ ಮರುಳು ಮುಂದುವರಿಸುತ್ತ)

ಕರ್ಣಸುತನು ಸತ್ತರೇನು ?
ತಡೆಯೆ, ಸಮರ ರಂಗಕೆ ?
ಕರ್ಣನೊಮ್ಮೆ ಸತ್ತು ಬೀಳ-
ಲೊಡನೆ ಬವರನಿಂತಿತೆ ?

(ಕಣಿಹೇಳುವ ದನಿಯಲ್ಲಿ)

ಇಂದು ಕರ್ಣಸುತನು ಬಿದ್ದ-
ನೀಗ ಪಾರ್ಥ ಕೆಡೆವನು.
ಪಾರ್ಥ ಬಿದ್ದರೇನು ಕುಂದು ?
ನೆತ್ತರೂಟ ಹೊಡೆವೆನು.

**ಅರ್ಜುನ** (ನಕ್ಕು)— ಮರುಳೊಂದು ಕಣಿವೇಳೆ ಬೆಚ್ಚುವನೆ ಪಾರ್ಥನವ ?
ಹಾಡು ಹಾಡೆಲೆ ಮರುಳೆ ! ಕೆಚ್ಚು ಮೂಡುತಲಿಹುದು
ನಿನ್ನ ದನಿಯುಗಿದಂತೆ.

ಮರುಳು ( ಕುಣಿಯುತ್ತ )—

ಸಾವು ಬಯಸಿಬಂದರೇನು ?
ಸಾವು ಬರುವದೆ ?
ತಿರೆಯ ಋಣವು ಹರಿದಮೇಲೆ
ಅದುವೆ ತಡೆವುದೆ ?

ಅರ್ಜುನ— ಸತ್ಯನುಡಿ ಎಲೆ ಮರುಳೆ! ನಿಜಮಾತು. ಬಾಳಹುರಿ ಬಿಚ್ಚುವದು ತಿರೆಜಿಲ್ಲಿ ಬಿಸುಟಿಬಿಡೆ ಒಪ್ಪಿದೆನು.

ಮರುಳು ( ಗಿರಗಿರನೆ ತಿರುಗಿ )

ಬಾನ ಬೀದಿಯಲ್ಲಿಯರುಣ
ತೇರ ಹೂಡಲು;
ತಣ್ಣಗಿರುವ ತಂಪುಗಾಳಿ
ತಿರೆಯ ತೀಡಲು,

ಮರುಳ ಬಿಂಕ ಮುಗಿಯಿತಲ್ಲಿ
ನೇಸರುದಿಸಲು;
ಮರಳಿ ನಿಶೆಯು ಮೂಡುವಲ್ಲಿ
ಮರುಳಿಗಾಸರು.

ಮರುಳು ಗೆಳೆಯ ! ಬೇಗನೇಳು
ಸಾಕು ನೆತ್ತರೂಟವು
ಇಂದು ಪಾರ್ಥಕೆಡೆವ ದಿನವು
ಸೊಗಸುವೆತ್ತ ನೋಟವು.

( ಮರುಳುಗಳೆಲ್ಲ ಒಂದನ್ನೊಂದು ಹಿಂಬಾಲಿಸುತ್ತ ರಂಗದಿಂದ ಮರೆಯಾಗುವವು. ಬಭ್ರುವಾಹನನು ಗಹಗಹಿಸಿ ನಗುತ್ತ ಅದೇ ಹಾದಿಯಿಂದ ಬರುವನು. ( ರಣ ) ರಂಗವೆಲ್ಲ ನಗೆಯಿಂದ ತುಂಬಿದಂತೆ ಭಾಸವಾಗುವದು. )

ಅರ್ಜುನ— ಯಾರಿಂತುಗಹಗಹಿಸಿ ನಗುತಿಹರು ? ಮರುಳೇನೊ ?
ಸಂಗೀತ ಸಾಕಾಗಿ ನಗುವೀಗ ಮೂಡುತಿದೆ
ಎಲೆ ಮರುಳೆ............

**ಬಭ್ರುವಾಹನ** ( ತಡೆದು )—ಮರುಳಹುದು. ನಾನಿನ್ನ ಮರುಳಿಹೆನು
ಕಣ್ದೆರೆದು ನೈವೆತ್ತು ನಿಂತಿರುವ ಮರುಳೆನ್ನ
ನೋಡೆಲವೊ! ಪಾರ್ಥ! ಹೆಂಬೇಡಿಯಂತೇಕೆ ಕಂ
ಬನಿಯ ಸುರಿಸುತಿಹೆ. ಕ್ಷತ್ರಿಯನು ನೀನಲ್ತೆ?
ಉಚ್ಚಜಾತಿಯೊಳುದ್ಭವಿಸಿದಾತ?

**ಅರ್ಜುನ** ( ಸೆಣಸುನುಡಿಗಳಿಂದ ಎಚ್ಚತ್ತವನಂತೆ )—ಆರೆಲವೊ
ಕೆಣಕುತಿಹೆ ನನ್ನನ್ನು?

**ಬಭ್ರುವಾಹನ** ( ಎದೆ ಸೆಟಿಸಿ )— ನಾನಿನ್ನ ಅಂತಕನು!
ನಿನ್ನ ಮಗನೆಂಬವನ ಮುಕ್ಕಿರುವ ಜವರಾಯ!
ನಿನ್ನೊಡಲಬಗಿಯಲಿಕೆ ಪಣತೊಟ್ಟ ಗಂಡುಗಲಿ!
ಅರ್ಜುನಾ! ಮಡಿದಳಲ ಸಂತಾಪಸುಡುತಿಹುದೆ?
ಕ್ಷತ್ರಿಯನು! ಉಚ್ಚಜಾತಿಯೊಳುದ್ಭವನು! ಹಹ್ಹ!
( ಗಹಗಹಿಸಿ ನಗುವನು )

**ಅರ್ಜುನ** ( ಅವಮಾನಿತನಾಗಿ )—
ವಿಷದನಗು! ನಗುನಗೆಲೆ ಕುಲಗೇಡಿ! ಸಾವಿದಿರು
ಸರಸಾಟವಾಡುತಿರೆ, ಬಾಳ್ಮುಗಿವಕಾಲದಲಿ
ಸಂತಸದಿ ನಲಿಯುತಿಹ ನಿನಗಾಗಿ ಮರುಗುವೆನು.

**ಬಭ್ರುವಾಹನ** ( ಅದೇ ದನಿಯಲ್ಲಿ )—
ಹುಚ್ಚೆನಿತು ಬಲವಾಗಿ ಅಂಟಿಹುದು ಎಲೆ ಮರುಳೆ!
ಮರುಗುವೆನು ನಿನಗಾಗಿ, ಕಲಿಪಾರ್ಥನೆಂಬವನು
ಮರುಳಾಗಿ ಬಾಳುವದ ನೋಡುತಿರೆ ಮರಗುವೆನು.

**ಅರ್ಜುನ** ( ನೊಂದವನಾಗಿ )— ಸೆಣಸುನುಡಿ! ಕೆಣಕದಿರು! ಕೈಹಿಡಿದ ನಿನ್ನವಳ
ಮಾಂಗಲ್ಯ ಸೂತ್ರವದು ಬಾಳುವದು ಚಣಕಾಲ.

**ಬಭ್ರುವಾಹನ** ( ದರ್ಪದಿಂದ )—ಕೊಬ್ಬುನುಡಿಯಾಡದಿರು. ರಣದಲ್ಲಿ ಕೆಣಕೆನ್ನ-
ನಾಮೇಲೆ ನಾಲಿಗೆಯ ಹರಿಯುಬಿಡು ಬಿಂಕತನ
ಬಾಳುವದು ಚಣಕಾಲ ಮಾತ್ರವೇ!

ಅರ್ಜುನ — ವೇದಾಂತ

ತಿಳುಹಿಸಲು ನೀನೆಷ್ಟರವನೆಲವೊ ! ಎಲೆಕೂಸೆ !
ನೀನಿಂತು ಹೇಳುವನಂದೇಕೆ ಹುಡಿಯೊಳಗೆ
ಹೊರಳಾಡಿ ಹಂದಿಯಂತೆಸೆಗಿದೆಯೊ ?

ಬಭ್ರುವಾಹನ (ಕಿಚ್ಚಿನ ದನಿಯಲ್ಲಿ) — ತಾಯುನುಡಿ

ವೀರಪೆಸು ! ಬಲ್ಲಿದಾ ನರವೀರ ! ನೀನಂತು
ಸಿಂಹಸನು ! ಅಲ್ಲಲ್ಲ ! ದುರಭಿಮಾನದ ಮೂರ್ತಿ ?
ಬಿಂಕತನ ಬೀರರಿಗೆ ದೋಷವಿಂದೆ ಬಲ್ಲಿದಾ ?

ಅರ್ಜುನ— ಬಲ್ಲೆಸರಿ ! ನಾನೆಲ್ಲ ನೀತಿಯನು ತಿಳಿದಿಹೆನು.
ಬಿಂಕತನ ದೊರೆಗಲ್ಲ ಕಣದಲ್ಲಿ ತಿಕ್ಕಿಸೆನು.
ಅಳಿರದ ಬಿಂಕವೋ ? ತಿಳಿದಿರುವ ಬಿಂಕವೋ ?
ನೋಡುತಿರು, ನಿನ್ನೊಡನೆ ಒಣಮಾತು ಬೆಳೆಸಲೇಂ ?

ಬಭ್ರುವಾಹನ [ಕೆಣಕಿ ಸಿಟ್ಟುಗೆಬ್ಬಿಸುವ ಗಡಸು ದನಿಯಲ್ಲಿ]—
ನಾನಳಿದು ಕೊಂಡಿಹೆನು ನಿನ್ನಳವನೆಲೆ ಪಾರ್ಥ !
ಮುರಹರಿಯು ಮುಂದಿರದೆ ನೀನೆನಿತು ಕಾಳಗದಿ
ಗೆಲ್ದಿಹೆಯೊ ? ಸಾರಥ್ಯವನದಿರೆ ನಿನಗೊಂದು
ಗೆಲುಮೆಯೇ ? ಗೆಲುವಿಹುದು ನಿನಗಲ್ಲವೆಲೆಪಾರ್ಥ !
ಆದೇವ ದೇವನಿಗೆ ಸಲ್ಲುತಿವೆ ಕಂಡೆಯಾ ?

ಅರ್ಜುನ— ಗಂಡುಗಲಿ ರವಿಸುತನ ಭಾರತದ ಬವರದಲಿ
ತೆಗೆದೆಚ್ಚಸಿಟ್ಟಾರುಕೆಡವಿದರೊ ? ಬಾಯ್ಬಡಕ !

ಬಭ್ರುವಾಹನ—ಬಲುಬೀರ ತೋರಿದೆಯೊ ನೀನಂದು, ರಣಹೇಡಿ !
ಅವನರಥವಾಳದಲಿ ಕುಸಿಬೀಳಲದನವನು
ಮೇಗೆತ್ತಿಕೊಳ್ಳುತಿರೆ, ನಿಸ್ಸಹಾಯತೆಯಿಂದ-
ಲಾಯುತಂ ಸಿಲ್ಕಿನಂ ಗಾಂಡೀವ ದಿಂದಿರಿಯೆ
ಹೇಸಿದವು ದಿಕ್ಕುಗಳು. ನಾಣ್ಚಿದವು ಹಕ್ಕಿಗಳು
ನಿನ್ನದಟಿಗಾದಿನವು. ಮೇಲಂದು ಹರಿ ನಿನ್ನ

ನೆರವಿಗಿಲ್ಲದಿರ್ದೊಡೆ, ನೀನಂದು ಅಲ್ಲಿಯೇ
ಇಲ್ಲವಾಗುತಲಿದ್ದೆ. ಸಾಹಸವನಿಂಥದನು
ಬಣ್ಣಿಪೊಡೆ ಬಾಯ್ಬಿಡುವ ನಿನ್ನದಟನರಿತಾಯ್ತು.
ಪೇಳಿನ್ನು ಇಂತೆಷ್ಟು ಘನಕಜ್ಜಗಳನೆಸಗಿರುವೆ ?

**ಅರ್ಜುನ** ( ಪೆಟ್ಟುತಿಂದ ನಾಗನಂತೆ ಭುಸುಗುಟ್ಟುತ್ತ ರೊಚ್ಚಿಗೆದ್ದು )—
ನೀನೆನ್ನ ಸೈರಣೆಯ ಕೆಣಕುತಿಹೆ, ಬಲುಜೋಕೆ
ಭಾರತದ ಕೊಳಗುಳದಿ ಕಾದಕಲಿ ಮರೆಯದಿರು
ಮೂಲೋಕಪತಿ ನಾನು. ಕಲಿತನವು ಎನ್ನದಿದೆ.
ಗಾಂಡೀವವೆನ್ನದಿದೆ. ಗೆಲವೆಣ್ಣು ನನ್ನವಳು.
ಕುರುಬಲವು ನನ್ನಿಂದೆ–ನನ್ನಿಂದೆ ಮಾತ್ರವೇ
ಹಾಳಾಗಿ ಹೋಗಿಹುದು. ನೀನೆಷ್ಟರವನೆಲವೊ ?

**ಬಭ್ರುವಾಹನ** (ಅರ್ಜುನನ ವಾಚಾಳಿತನಕ್ಕೆ ಗಹಗಹಿಸಿ ನಗುತ್ತ)—
ಸಂತಸವು ! ನೀನಿಂತು ಹರಿಬಲವ ಮರೆಯುವೊಡೆ
ಗೆಲವೆನಗೆ ನಿಶ್ಚಯವು. ಗರತಿಯಳ ಹಳಿದಿರುವ
ನಿನಗೆಲ್ಲಿ ಗೆಲುವುಂಯೋ ? ಹದಿಬದೆಯ ನಿಂದಿಸುವ
ಕುಹಕರಿಗೆ ಜಯವಿಹುದೆ ?

**ಅರ್ಜುನ** ( ಒಮ್ಮೆಲೆ ಏರಿಹೋಗುತ್ತ)—ಬಾಯ್ಮುಚ್ಚು ಕೀಳನೇ !
ಪಶುವಂತೆ ಬಗುಳವಿರು ! ನನ್ನದಟಿಗೆರವಾಗು.

**ಬಭ್ರುವಾಹನ** ( ನಿಸ್ತರಿಸುತ್ತ )—
ಪಶುಪತಿಯನೆನೆಯಿನ್ನು ! ಗಾಂಡೀವ ತೋಡುತೇಳು !
ಕಾಳಗದ ಬಿರುಗಾಳಿ ಬೀಸುತಿದೆ, ಸೂಸುತಿದೆ
ಎನ್ನೆದೆಯ ಕುಣಿಸುತಿದೆ ರಣಗಾಳಿ.

( ಕಾಳಗ ಮಾಡುವರು. ಅರ್ಜುನನ ಶಸ್ತ್ರಾಸ್ತ್ರಗಳಲ್ಲಿ ಬಲವಡಗುವದು. )

**ಅರ್ಜುನ** ( ದಿಕ್ಕೆಟ್ಟ ದನಿಯಲ್ಲಿ )— ಅಚ್ಚರಿಯು !
ನಾ ತೊಟ್ಟ ಬಾಣದಲಿ ಬಲವೆಲ್ಲ ಕುಂದುತಿದೆ. .
ಗಾಂಡೀವ ದನಿಗೆಟ್ಟು ಬಿದಿರಂತೆ ಬಾಳುತಿದೆ
ಅಕಟಕಟ ! ಕರವೇಕೆ ನಡಗುತಿದೆ ಗಡಗಡನೆ ?

**ಬಭ್ರುವಾಹನ** (ರೊಚ್ಚಿನಿಂದ)—

ತಾಯಿಗಿದು! ಬಿಂಕಕಿದು! ನನ್ನೊಡೆದ ಕಾಲಿಗಿದು!
ಇದು ನೋಡು ನಿನ್ನೆದೆಗೆ! ಪಂತಕಿದು ಗಂಟಲಕೆ!

**ಅರ್ಜುನ** (ಪೂರಾ ತಿಳಿಯದವನಾಗಿ ಅಸಹಾಯಕ ದನಿಯಲ್ಲಿ)—

ಕತ್ತಲೆಯು ಮುಸುಕುತಿದೆ. ದೆಸೆಯೊಂದು ಕಾಣದಿದೆ.
ಕೈಚಳಕ ತೋರದಿದೆ. ಸೋಲಿಸಗೆ ಸಿದ್ಧವಿದೆ.

**ಬಭ್ರುವಾಹನ**— ಕಡೆಗೊಂದು ಕಡಿತವಿದು! ನಿನ್ನಾಯು ಕುಡಿವವಿದು!
ಎಚ್ಚರಿಕೆ ಬಲುಜೋಕೆ! ನಿಮಿಷದಲಿ ಕೆಡೆಯುತಿಹೆ

**ಅರ್ಜುನ**— ಶ್ರೀಹರೀ! ಶ್ರೀಹರೀ............

**ಬಭ್ರುವಾಹನ**— ಕಡೆಗಾಲ ಬಂದಾಗ ಶ್ರೀಹರಿಯ ನೆನೆಯುವನು
ಹರಿಬಂದು ಕಾಯ್ವುದಕೆ ಮುನ್ನವೇ ಕಳಿಸುವೆನು

(ಪಾರ್ಥನು ಬೀಳುವನು. ಬಭ್ರುವಾಹನನು ಬಿಲ್ಲನ್ನು ದೂರ ಬಿಸುಟ ತಂದೆಯನ್ನು ತೊಡೆಯಮೇಲೆ ಹಾಕಿಕೊಳ್ಳುವನು.)

**ಅರ್ಜುನ** (ನೋವನ್ನನುಭವಿಸುವ ಸ್ವರದಲ್ಲಿ)—

ಸಂಕಟವು!.... ಸಂಕಟವು!.... ನೋವೆನಿತು ಪ್ರಬಲವಿದು!
ಸಾವೆನ್ನ ಸನಿಹದಲಿ ಸುಳಿಯುತಿದೆ....ಶ್ರೀಹರೀ!
ಕಡೆಗೊಮ್ಮೆ ಪಾದಗಳ ದರ್ಶನವ ನೀಯುವುದು.
ವೈಕುಂಠಪುರಕೆನ್ನನೊಯ್ಯುವವು, ಹೇದೇವ!
ತವಪಾದ ಪದ್ಮಗಳು! (ಉಸಿರಿಟ್ಟು) ಯಾರೆನ್ನ ನೀತೆರದಿ
ಸಂತೈಸುತಿಹರಿಲ್ಲಿ?

**ಬಭ್ರುವಾಹನ** (ಪಶ್ಚಾತ್ತಾಪದುಂಬಿದ ದನಿಯಲ್ಲಿ)—ನಾನಿಹೆನು ಚಾಂಡಾಲ
ನಿನ್ನ ಮಗ. ಪಿತೃಘಾತವೆಸಗಿರ್ಪ ಪಾಪಾತ್ಮ
ನಾನಿಹೆನು.

**ಅರ್ಜುನ** (ಕಣ್ಣು ಪಿಳುಕಿಸಿ)— ಪಿತೃಘಾತವೆಸಗಿರ್ಪ....ನೀ–ನೇ–ಕೆ
ನನಗಾಗಿ ಬಳಲುತಿಹೆ? ಕೊಂ–ದ–ವ–ನು ಕೆಡೆದವಗೆ
ಮರುಗು–ವ–ದು ಸರಿಯಲ್ತು.

**ಬಭ್ರುವಾಹನ** ( ಕಣ್ಣೀರನ್ನೊರಸಿಕೊಂಡು )— ಸತ್ತುಮೇಲ್ಸೇಡೆಲ್ಲಿ ?
ತಾತಯ್ಯ ! ಧರೆಗೆನ್ನನಿದಕಾಗಿ. ನಿಜಪಿತನ
ವಧೆಗಾಗಿ ನೀನೇಕೆ ಜನ್ಮವಿತ್ತೆನಗಯ್ಯೊ !
ತಾಯೆಂತು ಗೋಳಿಟ್ಟು ಮಗನೆನ್ನ ದೂರ್ಪಳೋ
ನೂರುಸಲ ಶಪಿಸುವಳೋ ? ಬಿದಿಯೆಸೆತು ಘೋರವೋ !

**ಅರ್ಜುನ** ( ಏನೋ ನೆನಸಾಗಿ ನೆನೆಪಾದದ್ದು ನಿಜವೆಂಬ ಮುಖ ಮುದ್ರೆಯಲ್ಲಿ, ಸಣ್ಣದನಿಯಲ್ಲಿ )—ಉಸಿ–ರೆನ್ನ ಹತ್ತಿರಕೆ ಬರುತಲಿದೆ ಬಾವೀರ !
ಎನ್ನ-ಣು-ಗ....ನೀನಹುದು. ಬಿಂಕದಲಿ....ಮೈಮರೆತು
ಅಂಕದಲಿ ಮೈಮರೆತೆ. ಹದಿಬದಿಗೆ ಕೀ....ಳ್ಬ....ಗೆ....ದೆ..
( ಕಣ್ಣೀರು )

**ಬಭ್ರುವಾಹನ**— ಮರೆಯುವದು ತಾತಯ್ಯ ! ಶಾಂತನಾಗಿರು ತಂದೆ !

**ಅರ್ಜುನ** ( ಕನಸಿನಲ್ಲಿ ಕನವರಿಸುವಂತೆ )—
ಹಾ-ಚಿತ್ರೆ !.... ಹಾ ದೇವಿ !.... ಪರಿಶುದ್ಧಮೂರ್ತಿಯೆ; !
ಸಾಕಾರ....ವಾಗೆನ್ನ....ನುಡಿಗಳಿದೊ....ನಿಂತಿಹವು.
ಬಾಯಿಲ್ಲಿ ! ನೋಡು ಬಾ !....ನಿಂದಕನು....ಕೆಡೆದೆಂತು
ಶೋಭಿಪನು....ಕಾಣು ಬಾ !.... ಮೂಲೋಕ ಕಲಿಯಿವನ
ಕಲಿತನದ....ಕೊನೆಗಾಲ....ವೆಂತಿಹುದು....ನೋಡು ಬಾ !
ಹಾ ಚಿತ್ರೆ !....ಮಣಿಪುರವೆ....ನನ್ನ ಬೆಡಗಿನ ರೂಪೆ !
( ಉಸಿರಿಟ್ಟು ) ಕನಸದುವು....ಕನಸದುವು....ಎಲ್ಲವೂ....ಕನಸೀಗ
ಹದಿಬದಿಗೆ....ಕುಂದಿಟ್ಟು....ನೋಯಿಸಿದ ದೋಷಮೇ
ನೇರೆನ್ನ....ನರಕಕ್ಕೆ....ತಳ್ಳುತಿದೆ. ಕಾಪಾಡು
ಬಾನಲ್ಲೆ ! ಕಡೆಗಾಲದಲ್ಲಿಯೂ....ಕಠಿಣಾತ್ಮ
ಯಾಗದಿರು. ಚಣದಲ್ಲಿ ತಿರೆಯೆನ್ನ....ಬಿಸು-ಟುತಿ-ದೆ.

**ಬಭ್ರುವಾಹನ** ( ಬಿಕ್ಕಿ ಬಿಕ್ಕಿ ಅಳುತ್ತ )—
ವಿಷಗಾಲದರಿವೇಕೆ ಶಾಂತನಾಗಿರು ತಾತ !
ನೀನಳಿದ ಮೇಲೆಂತು ಬಾಳುವೆನು ತಾತಯ್ಯ !
ಕೊಲೆಗಾರ ಮಗನೆಂದು ಮೂಲೋಕವೇಳಿಪುದು.

ಅರ್ಜುನ ( ನ್ಮುಡಡಿ )— ಕೆಡಕಾಡಿ....ಕೆಡಬೇಡ....ಕಂದಯ್ಯ ! ನೀನೆ
ಮುದ್ದು ಸುತ. ( ನೋವು ) ಅಕಟಕಟ !....ಸಂಕಟವು !
ಮುರಹರಾ !....ಎಲ್ಲಿರುವೆ ? ಬೇಗ ಬಾ....ಎನ್ನೊಡೆಯ !
ನೀನೆನ್ನ....ಕೈವಾರಿ.... ನೀನೆನ್ನ.... ಮುದ್ದು ಸಖ !
ಅಕ್ಕಟಾ !.... ಸಂಕಟವು | ಜನ್ನ ಹಯ ! ಶ್ರೀ....ಕೃ....
( ಒಮ್ಮೆಲೆ ) ಯಾರು....ಬಂ....ದವರಲ್ಲಿ ? ವೃಷ....ಕೇ–ತು !

ಅಭಿಮನ

ಎಲ್ಲಿಯುಡ....ಗಿದ....ರವರು ? ಪುತ್ರರು....ಬಂದಿಹರು ?
( ದಿಟ್ಟಿಸಿ ನೋಡುತ್ತ ) ಭೀಕರದ....ರೂಪವೆ !.... ಬಂದೆನಿದೊ !

ಬಂದೆನಿದೆ

ಎಳೆಯದಿರು....! ಎಳೆಯದಿರು !.... ಬಂದೆನಿದೊ ! ಬಂದೆನಿದೊ
ಕಾ—ಪಾ–ಡು ......ಮುರ....ವೈ....ರಿ
ಮು....ರ....ಹ....ರಾ ! ಕಾ....ಪಾ..........

( ಪ್ರಾಣೋತ್ಕ್ರಮಣವಾಗುವುದು. )

(ಅರ್ಜುನನು ಸಾಯುತ್ತಲೇ ಚಿತ್ರಾಂಗದೆಯು “ ನಿನ್ನ ಕುವರನು ನಲ್ಲ ” ಎನ ಮಿಂಚಿನಂತೆ ನುಗ್ಗುವಳು. ಅರ್ಜುನನ ಹೆಣದ ಮೇಲೆ ಮೂರ್ಛೆಗೊಂಡು ಬಿದ್ದಿ ಮಗನನ್ನು ನೋಡಿ. “ ಅಯ್ಯೊ ಅಯ್ಯೋ !” ಎಂದೊದರಿ ದೊಪ್ಪನೆ ಬಿದ್ದು ಬಿಡುವ ಪರದೆ ಸರಸರನೆ ಬೀಳುವದು. )

—○—

ಎಂಟು ದೃಶ್ಯಗಳ ಈ ಕಾವ್ಯರೂಪಕದಲ್ಲಿ ಶ್ರೀ. ಕೃಷ್ಣಮೂರ್ತಿ
ಯವರು ಮಹಾಭಾರತದೊಳಗಿನ ಒಂದು ಅತ್ಯಂತ ಮಾರ್ಮಿಕವಾ
ನಾಟಕೀಯ ಸನ್ನಿವೇಶವನ್ನು ಒಂದು ಹೊಸ ನೋಟದಿಂದ ಯಶಸ
ಯಾಗಿ ಚಿತ್ರಿಸಿದ್ದಾರೆಂದು ಹೇಳಬಹುದು. “ರಕ್ಷಿಪನು ಪರಮಾತ್ಮ
“ಕಾಯುವನು ಪರಮಾತ್ಮ” ಎಂಬ ಧರ್ಮರಾಜ; ನಿಮ್ಮ ಧರ್ಮ
ನೆರವು ನಿಮಗಿರಲಿ; ನನ್ನ ಬವಣೆಯ ಬೀದಿ ನನಗಿರಲಿ....ಮಾನಗೇ
ಗಳಾಗಿ ಪಶುವಂತೆ ಬಾಳಿಳಿದು ಬಾಳುವುದಕಿಂತಲೂ ವನವಾ
ಕೇಡೇನು ? ” ಎಂಬ ದ್ರೌಪದಿ; “ಅಣ್ಣನಾಣತಿ ಮೀರಿ ನಡೆಯುವೊ
ನರಕವಿದೆ, ಮೀರಿದೊಡೆ ಮಾನಹಾನಿಗೆ ಬೆಂದ ಮಾನಿನಿಯ ಶಾಪವಿದೆ
ಎಂಬ ಅರ್ಜುನ; “ಹೆಣ್ಣುಧರ್ಮವನುಳಿಸಿ ಹೆಂಡತಿಯ ಕಾಯುವುದ
ಹೆಂಬ ಭೀಮನ ಧರ್ಮ, ಎಂಬ ಭೀಮಸೇನ. ಈ ನಾಲ್ಕು ವ್ಯಕ್ತಿ ಚಿತ್ರ
ಗಳಲ್ಲಿ ಮಾನವಸ್ವಭಾವದ ಮುಖ್ಯ ಮಾದರಿಗಳನ್ನು, ಮಾನವಸಮಾಜದ
ಶಾಶ್ವತ ಸಮಸ್ಯೆಗಳನ್ನು ಶ್ರೀ. ಕೃಷ್ಣಮೂರ್ತಿಯವರು ಮನೋಹರವಾಗಿ
ವಿವರಿಸಿದ್ದಾರೆ. ಶೈಲಿಯಲ್ಲಿ ಓಜಸ್ಸಿದೆ. ಸನ್ನಿವೇಶಕ್ಕೆ ಸಲ್ಲುವ ಓಟವೂ
ಇದೆ. ಕಲಿಭೀಮನಿಗೆ ಸೀರೆಯನ್ನುಡಿಸದೆ ಕೀಚಕವಧನನ್ನು ಮಾಡಿಸಿದ್ದು
ಸನ್ನಿವೇಶದ ಗಾಂಭೀರ್ಯವನ್ನು ಕಾಯ್ದುಕೊಳ್ಳುವ ಹೊಸರೀತಿ
ಯಾಗಿದೆ. ಈ ಚಿಕ್ಕ ದೃಶ್ಯವನ್ನು ಓದಿ ಮುಗಿಸಿದಾಕ್ಷಣ ಇಲ್ಲಿಯ
ಕೊನೆಯ ಸಾಲನ್ನೆ ಬದಲಾಯಿಸಿ

ಬಾಯಿಬಿಗಿ ವಿಮರ್ಶೆಯೆ! ರಸದೂಟ ಸಮಯವಿದೆ, ಎಂದು
ಹೇಳಬೇಕೆನ್ನಿಸುತ್ತಿದೆ.

ಶ್ರೀರಂಗ